"ಅಚಲ'' ಪತ್ರಿಕೆಯನ್ನು ಪಡೆಯ ಬಯಸುವವರು ದಯವಿಟ್ಟು ಕೆಳಗಿನ ವಿಳಾಸಕ್ಕೆ ಹದಿನೈದು ರೂಪಾಯಿಗಳನ್ನು ಎಂ. ಒ./ಡ್ರಾಫ್ಟ್ ಮೂಲಕ ಕಳುಹಿಸಿ, ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ಸ್ಪಷ್ಟವಾಗಿ ಬರೆಯಬೇಕು. ಚೆಕ್ ಮೂಲಕ ಹಣ ಕಳಿಸುವವರು 20/ರೂ. ಗಳಿಗೆ ಕಳಿಸಬೇಕು. ಚಂದಾದಾರರು ತಮ್ಮ ವಿಳಾಸ ಬದಲಾದರೆ ಕೂಡಲೆ ಕಾರ್ಡಿನಲ್ಲಿ ಬರೆದು ತಿಳಿಸಬೇಕು.



ಲೇಖನ, ಹಣ ಕಳುಹಿಸಬೇಕಾದ ವಿಳಾಸ :—

**ಎನ್. ಗಾಯತ್ರಿ**
ಬಿ-30, ರಿಸರ್ವ್ ಬ್ಯಾಂಕ್ ಸ್ಟಾಫ್ ಕ್ವಾರ್ಟರ್ಸ್
9ನೇ ಕ್ರಾಸ್, ಒಂದನೇ ಮೇನ್
ವಿಜಯನಗರ 2ನೇ ಹಂತ
ಬೆಂಗಳೂರು-560 040



ಚಂದಾ ವಿವರ :

ವಾರ್ಷಿಕ ಚಂದಾ : ರೂ. 15.00
ಆಜೀವ ಚಂದಾ : ರೂ. 150.00
(ಚೆಕ್ ಮೂಲಕ : ರೂ. 160.00
ಸಂಸ್ಥೆಗಳಿಗೆ : ರೂ. 200.00
ಬಿಡಿ ಪ್ರತಿ : ರೂ. 2.00
ವಿಶೇಷ ಪ್ರತಿ : ರೂ. 3.50

## ಒಳಗೇನಿದೆ ?






Printed at Lipi Mudrana,
No. 1, Bugle Rock Road Bangalore-4
Published by Dr. G. Ramakrishna on behalf of Jagruthi Mahila Adhyayana Kendra, 26, I Main Road, Vyalikaval, Bangalore-3

Editor : N. Gayathri

# ಸಂಪಾದಕೀಯ

## ಮಹಿಳೆಗೆ ರಾಜಕೀಯ ಅಧಿಕಾರ : ಚಳವಳಿಗೆ ಸ್ವವಿಮರ್ಶೆಯ ಅಗತ್ಯ

‘ಇಪ್ಪತ್ತನೆಯ ಶತಮಾನದ ಬಹು ನಿರ್ಣಯಾತ್ಮಕ ಘಟನೆ’, ‘ಮಹಿಳೆಯರ ಬದುಕುಗಳನ್ನು ಪರಿವರ್ತಿಸುವಂಥ ಕ್ರಿಯೆ’ ಮುಂತಾಗಿ ವಿವಿಧ ಸಮೂಹ ಮಾಧ್ಯಮಗಳಿಂದ ಬಣ್ಣಿಸಲ್ಪಟ್ಟ ನಾಲ್ಕನೆಯ ವಿಶ್ವ ಮಹಿಳಾ ಸಮ್ಮೇಳನ ಮುಗಿದಿದೆ. (ಸೆಪ್ಟೆಂಬರ್ 1995, ಬೀಜಿಂಗ್). ಆದರ ಫಲಶ್ರುತಿಗಳನ್ನು ನಮ್ಮ ಸಂದರ್ಭದಲ್ಲಿ ವಿಮರ್ಶಿಸಿಕೊಳ್ಳುವ ಜವಾಬ್ದಾರಿ ಮಹಿಳಾ ಸಂಘಟನೆಗಳ ಮೇಲಿದೆ.

ಭಾರತದ ಮಟ್ಟಿಗೆ ಹೇಳಬಹುದಾದ ಬಹು ಮುಖ್ಯ ಸಾಧನೆ, ಬೇರಿನ ನೆಲೆಯಲ್ಲಿ ಕ್ರಿಯಾನಿರತವಾಗಿರುವ ಮಹಿಳಾ ಸಂಘಟನೆಗಳು, ಸರ್ಕಾರೇತರ ಸಂಘಸಂಸ್ಥೆಗಳು ಇಲ್ಲಿನ ಎಲ್ಲ ಸಾಮಾಜಿಕ ಸ್ತರದ ಮಹಿಳೆಯರ ವಾಸ್ತವಾಂಶಗಳನ್ನು, ಅವರ ವಿಶಿಷ್ಟ ಸಮಸ್ಯೆಗಳನ್ನೂ ಜಾಗತಿಕ ವೇದಿಕೆಗೆ ಕೊಂಡೊಯ್ದರು ಎಂಬುದು. ವಿಶ್ವದಾದ್ಯಂತ ಸಮಾನವೆನ್ನಬಹುದಾದ ಮಹಿಳೆಯರ ಮೇಲಿನ ಎಲ್ಲಾ ಬಗೆಯ ಹಿಂಸಾಚಾರಗಳ ವಿರುದ್ಧ ಈ ಸಮೇಳನ ಒಕ್ಕೊರಲಿನಿಂದ ತನ್ನ ನಿಲುವನ್ನು ಘೋಷಿಸಿದ್ದು ಅರ್ಥಪೂರ್ಣ. ಮನೆಯ ಒಳಗಿದ ದೌರ್ಜನ್ಯಗಳೂ ಸೇರಿದಂತೆ, ಬಲಾತ್ಕಾರದ ವೇಶ್ಯಾತನ, ಮಕ್ಕಳ ದೂಷಣೆ, ಸರ್ಕಾರಿ ಹಿಂಸಾತ್ಮಕ ಕಾರ್ಯಾಚರಣೆ, ಸಶಸ್ತ್ರ ಹೋರಾಟ, ಭಯೋತ್ಪಾದನೆಯ ಪರಿಸರದಲ್ಲಿರುವ ಮಹಿಳೆಯರ ಸ್ಥಿತಿಗಳನ್ನು ಜಗತ್ತಿನ ಗಮನಕ್ಕೆ ತರುವ ಈ ಯತ್ನ ಮುಖ್ಯವಾದದ್ದು.

ಚರ್ಚೆಗೆ ಅರ್ಹವಾದ ಮತ್ತೊಂದು ಮುಖ್ಯವಿಚಾರ ಮಹಿಳೆಯರ ರಾಜಕೀಯ ಅಧಿಕಾರ ಪ್ರವೇಶಕ್ಕೆ ಸಂಬಂಧಿಸಿದೆ. ಅಭಿವೃದ್ಧಿ ಶೀಲ ದೇಶಗಳಲ್ಲಿ ಇತ್ತೀಚೆಗೆ ದಿಢೀರನೆ ಪ್ರಾರಂಭವಾದ ರಾಚನಿಕ ಹೊಂದಾಣಿಕೆಗಳು (ಉದಾರೀಕರಣ, ಜಾಗತೀಕರಣ ಇತ್ಯಾದಿ.) ಇಲ್ಲಿನ ತೀರಾಬಡವರಾದ ಮಹಿಳೆಯರ ಬದುಕುಗಳಿಗೆ ಲಭ್ಯವಿದ್ದ ಆರ್ಥಿಕ ಬೆಂಬಲದ ಎಲ್ಲ ಸವಲತ್ತುಗಳನ್ನೂ ನಾಶಪಡಿಸುತ್ತಿರುವ, ಅವರನ್ನು ದುರ್ಬರಸ್ಥಿತಿಗೆ ದೂಡುತ್ತಿರುವ ಬಗೆ ನಿಜಕ್ಕೂ ಕಳವಳ ಹುಟ್ಟಿಸುವಂಥದು.

ಆರ್ಥಿಕ ಬದಲಾವಣೆ, ಕೈಗಾರಿಕೀಕರಣಗಳ ಈ ತೀವ್ರ ಆಘಾತದ ಎದುರಲ್ಲಿ ಭಾರತದಂಥ ದೇಶದ ಅರ್ಧಜನ ಸುಮ್ಮನೆ ಅಸಹಾಯಕವಾಗಿ ತಮ್ಮನ್ನು ಪರಿಸ್ಥಿತಿಗೆ ತೆತ್ತುಕೊಳ್ಳಬೇಕಾಗಿ ಬಂದಿರುವುದಕ್ಕೆ ಅವರಿಗೆ ರಾಜಕೀಯ, ಆರ್ಥಿಕ ನಿರ್ಣಯಗಳನ್ನು ಕೈಗೊಳ್ಳುವ ಸ್ಥಾನಗಳಿಗೆ ಪ್ರವೇಶವಿಲ್ಲದಿರುವುದೂ ಒಂದು ಮುಖ್ಯ ಕಾರಣ. ಸಂವಿಧಾನದಲ್ಲಿ ಹೇಳಲಾದ ಸಮಾನಸ್ಥಾನದ ಹಕ್ಕು ವಾಸ್ತವ ರಾಜಕೀಯದಲ್ಲಿ ನಿರ್ಲಕ್ಷಿತವಾಗಿರುವ ವಿಷಯ. ಆದ್ದರಿಂದ ಸಂಸತ್ತು ಸ್ಥಾನಗಳಲ್ಲಿ ಕನಿಷ್ಠ 33%ರಷ್ಟು ಮಹಿಳೆಯರೇ ಪ್ರತಿನಿಧಿಸುವಂತಾಗಬೇಕು, ಇದರ ಅಂತಿಮಗುರಿ ಶೇಕಡ 50ನ್ನು ತಲುಪುವುದಾಗಿರಬೇಕು ಎಂಬುದು ಬಹುಕಾಲದಿಂದಲೂ ಇರುವ ಬೇಡಿಕೆ. ಶ್ರೀಮಂತ ರಾಷ್ಟ್ರಗಳಿಂದ ಅಷ್ಟಾಗಿ ಲಕ್ಷಿಸಲ್ಪಡದ ಈ ಅಂಶದತ್ತ ಗಮನಸೆಳೆವಲ್ಲಿ ಭಾರತೀಯ ಮಹಿಳೆಯರು ನಡೆಸಿದ ಪ್ರಯತ್ನ ಪ್ರಶಂಸನೀಯವಾದದ್ದು. ಆದರೆ ಈ ಒಟ್ಟು ಸಮ್ಮೇಳನದ ಎಲ್ಲ ನಿರ್ಣಯಗಳ ಬಗ್ಗೆ ವಿವಿಧ ಆಳುವ ಸರ್ಕಾರಗಳು ಹೇಗೆ ಬದ್ಧವಾಗಿ ಉಳಿಯಬಹುದು ಎಂಬ ಬಗ್ಗೆ ಯಾವುದೇ ಜಾಗತಿಕ ಕಾನೂನು ಅಥವಾ ಒತ್ತಡ ಹೇರಬಲ್ಲ ಶಕ್ತಿಯೂ ಇಲ್ಲ ಎಂಬ ಕೊರತೆ ಇಂಥ ಸಮ್ಮೇಳನಗಳ ತಳದಲ್ಲಿ ಕೂಡ ಮಹಿಳೆಯರಿಗೆ ನಿರ್ಣಯಾಧಿಕಾರ ಇಲ್ಲದಿರುವ ಜಾಗತಿಕ ಸ್ಥಿತಿಯನ್ನೇ ಸಂಕೇತಿಸುವಂತಿದೆ.

ಈ ವಿಶ್ವ ಮಹಿಳಾ ಸಮ್ಮೇಳನದ ಗದ್ದಲ, ಗಲಾಟೆಗಳ ನಡುವೆ, ಅದೇ ಹೊತ್ತಿನಲ್ಲಿ ಭಾರತದಲ್ಲಿ ಕೆಲವು ರಾಜ್ಯಗಳಲ್ಲಿ ಮಹಿಳೆಯರಿಗೆ ರಾಜಕೀಯ ಅಧಿಕಾರವನ್ನು ದೊರಕಿಸಿಕೊಡುವಯತ್ನದ ‘ಮೌನಕ್ರಾಂತಿ’ಯೊಂದು ಆರಂಭವಾಗಿದೆ. ಬೇರಿನ ನೆಲೆಯಲ್ಲಿ ಮಹಿಳೆಯರಿಗೆ ರಾಜಕೀಯಾಧಿಕಾರ ಒದಗಿಸುವ ಯತ್ನ ಕಳೆದ ಬಾರಿಯ ಸ್ಥಳೀಯ

ಚುನಾವಣೆಗಳಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳಲ್ಲಿ ನಡೆದಿದ್ದು, ಶೇ 40ರಷ್ಟು ಮಹಿಳೆಯರು ಚುನಾಯಿತರಾದದ್ದು ದಾಖಲೆಯೆನ್ನಿಸಿದೆ. ಭಾರತೀಯ ಸಂವಿಧಾನದಲ್ಲಿ ದತ್ತವಾಗಿರುವ ಸಮಾನಸ್ಥಾನಮಾನದ ಕನಸನ್ನು ನಿಜವಾಗಿಸುವ, ಹಾಗೂ ಲಿಂಗಾಧರಿತ ಅಸಮಾನತೆಯನ್ನು ತೊಡೆದು ಹಾಕುವ ಯತ್ನವಾಗಿ ತಾವು ಶೇ 33 ರಷ್ಟು ಸ್ಥಾನ ಮೀಸಲಾತಿಯನ್ನು ಮಹಿಳೆಯರಿಗೆ ಒದಗಿಸಲುಬದ್ಧರಾಗಿದ್ದೇವೆಂದು ಸಾರುವ ರಾಜಕೀಯ ಗಿಮ್ಮಿಕ್ಕುಗಳೂ ಇಲ್ಲಿ ಜನಪ್ರಿಯವಾಗಿವೆ. ಇಂಥ ಯತ್ನಗಳು ವಾಸ್ತವದಲ್ಲಿ ಪಿತೃಪ್ರಾಧಾನ್ಯದ ಸ್ವಹಿತಾಸಕ್ತಿಗಳ ಪ್ರಬಲಶಕ್ತಿಗಳ ನಡುವೆ ತಳೆಯುತ್ತಿರುವ ವಿಕೃತವೂ, ಗೊಂದಲಕರವೂ ಆದ ಸ್ವರೂಪಗಳನ್ನು ನಾವು ನಿರ್ಲಕ್ಷಿಸುವಂತಿಲ್ಲ. ನಮ್ಮ ಇಂದಿನ ಪರಿಸ್ಥಿತಿಯಲ್ಲಿ ಜಾಗತಿಕ ವೇದಿಕೆಗಳಲ್ಲಿ ಗಮನ ಸೆಳೆದ ಸಮಸ್ಯೆಗಳಷ್ಟೇ ಅಲ್ಲದೆ, ನಮ್ಮದೇ ಪರಿಸರ ಹುಟ್ಟುಹಾಕುತ್ತಿರುವ ಸಂಕೀರ್ಣ ಸಮಸ್ಯೆಗಳನ್ನೂ ಮಹಿಳಾ ಚಳವಳಿಗಳು ಎದುರಿಸಬೇಕಾಗಿದೆ.

ಇದುವರೆಗೆ ಭಾರತೀಯ ಸಮಾಜದಲ್ಲಿ ಇತ್ತು ಎನ್ನಲಾಗುತ್ತಿದ್ದ ಏಕತೆ, ಸಹಕಾರ ಮತ್ತು ಜಾತ್ಯತೀತತೆಯ ದಾರಗಳು ಹರಿದು ಹೋಗುತ್ತಿವೆ. ಆಳುವ ಗುಂಪುಗಳು ನಿಷ್ಪಕ್ಷವಾಗಿ ಉಳಿಯುವಲ್ಲಿ ವಿಫಲವಾಗುತ್ತಿವೆ. ಭಯೋತ್ಪಾದಕತನ, ಸಶಸ್ತ್ರ ಕದನಗಳಷ್ಟೇ ಅಲ್ಲದೇ ಅವುಗಳ ನಿಗ್ರಹಕ್ಕಾಗಿ ರೂಪುಗೊಂಡ ಕಾನೂನುಗಳೂ ಹಿಂಸಾಚಾರವನ್ನೇ ಹೆಚ್ಚಿಸುತ್ತಿವೆ. ತೀವ್ರ ವೇಗವಾಗಿ ಆವರಿಸುತ್ತಿರುವ ಕೈಗಾರಿಕೀಕರಣ ಹಾಗೂ ಜಾಗತಿಕ ಮುಕ್ತಮಾರು ಕಟ್ಟೆಗಳ ಪ್ರಕ್ರಿಯೆಗಳು ನಮ್ಮ ಸಮಾಜದಲ್ಲಿನ ಮತೀಯ ಶಕ್ತಿಗಳು ಸಂಘಟಿತವಾಗುವಂತೆ ಮಾಡುತ್ತಿವೆ. ಆರ್ಥಿಕ ರಾಚನಿಕ ಹೊಂದಾಣಿಕೆಗಳು ಸಮಾಜದ ಬಲಹೀನರಿಗೆ, ಹಿಂದುಳಿದವರಿಗೆ ಇದುವರೆಗೆ ಲಭ್ಯವಿದ್ದ ಆರ್ಥಿಕ ನೆರವಿನ ವ್ಯವಸ್ಥೆಯನ್ನೇ ನಾಶಪಡಿಸುತ್ತಿವೆ. ಇದರ ಫಲವಾಗಿ ಬಡತನದ ರೇಖೆಗಿಂತ ಕೆಳಗುಳಿದ ಜನ ಸಂಖ್ಯೆಯಲ್ಲಿ 70% ರಷ್ಟು ಇರುವ ಮಹಿಳೆಯರ ಬದುಕು ದುರ್ಭರವಾಗುತ್ತಿದೆ. ಮತೀಯವಾದಿ ಸಂಘಟನೆಗಳು ಈ ಬೆಳವಣಿಗೆಗಳನ್ನು 'ಏಕತೆ'ಯ ಲಕ್ಷಣವೆನ್ನುತ್ತ ಇದನ್ನು ತಮ್ಮ ರಾಜಕೀಯಕ್ಕೆ ಬಳಸಿಕೊಳ್ಳುತ್ತಿವೆ. ತಾವು ಈ ದೇಶಕ್ಕೆ ನಿಷ್ಠರು, ತಾವು ಜಾತ್ಯತೀತರು ಎಂಬುದನ್ನು ಅಲ್ಪಸಂಖ್ಯಾತರು ಮತ್ತೆ ಮತ್ತೆ ಸಾಬೀತು ಮಾಡಬೇಕಾದ ಒತ್ತಡಗಳನ್ನು ಇವು ಸೃಷ್ಟಿಸುತ್ತಿವೆ.

ಮತೀಯ ಘರ್ಷಣೆಗಳಲ್ಲಿ ಕೊಲೆ, ಸಾಮೂಹಿಕ ಅತ್ಯಾಚಾರಗಳಂಥ ಹಿಂಸೆಗಳಿಗೆ ಮೊದಲು ಬಲಿಪಶುಗಳು ಮಹಿಳೆಯರೇ. ಅವರ ವೇಷ, ಭೂಷಣ, ನಡುವಳಿಗಳಿಗೇ ಮೊದಲು ದಿಗ್ಬಂಧನಗಳು ಹೇರಲ್ಪಡುವುದು. ಮತೀಯವಾದದ ಮೂಲಕವಾಗಿ ಬೆರಳೆಣಿಕೆಯಷ್ಟು ಮಹಿಳೆರಿಗೆ ಸಾರ್ವಜನಿಕ ವೇದಿಕೆಗಳು ಲಭ್ಯವಾಗಿರುವುದು ನಿಜ. ಆದರೆ ಮತೀಯವಾದವಾಗಲಿ, ಮೂಲಭೂತವಾದವಾಗಲಿ, ತನ್ನ ಅಂತಿಮ ಯೋಜಿತ ಗುರಿಯಲ್ಲಿ ಮಹಿಳೆಯರನ್ನು ಪುರುಷ ಪ್ರಾಧಾನ್ಯದ ನಿರ್ಬಂಧಕಾರಿ ಚೌಕಟ್ಟುಗಳೊಳಗೇ ಉಳಿಸಿಡಲು ಯತ್ನಿಸುತ್ತವೆಯೇ ಹೊರತು ಬಿಡುಗಡೆಗೆ ಅಲ್ಲ, ಈ ಅಂಶ ಅಲ್ಪಸಂಖ್ಯಾತ ಹಾಗೂ ಬಹುಸಂಖ್ಯಾತ ಮಹಿಳೆಯರಿಬ್ಬರೂ ಅರ್ಥಮಾಡಿಕೊಳ್ಳಬೇಕಿದೆ.

ಇಂಥ ಪರಿಸ್ಥಿತಿಯಲ್ಲಿ ಮಹಿಳಾ ಚಳುವಳಿ ತೋರಿಕೆಯ ರಾಜಕೀಯ ಅಧಿಕಾರ, ಶೇಕಡ 33ರ ಮೀಸಲಾತಿಗಳ ಬಹಿರಂಗ ಆಕರ್ಷಣೆಗೆ ಬೆರಗಾಗಬಾರದು. ತೀರ ತಳಪಾಯದ ನೆಲೆಯಿಂದಲೂ ಮಹಿಳೆಯರೊಂದಿಗೆ ತಮ್ಮ ಸಂಘಟನೆಯ ಕೊಂಡಿಗಳನ್ನು ಬಲಪಡಿಸಿಕೊಳುವುದು ಇಂದು ಅತ್ಯಗತ್ಯವಾಗಿದೆ. ನಮ್ಮ ಸಮಾಜದ ಬಹುಸಾಂಸ್ಕೃತಿಕವಾದ ವೈವಿಧ್ಯಮಯ ಲಕ್ಷಣಗಳನ್ನು ಕಾಯ್ದು ಕೊಳ್ಳುವುದರ ಮೂಲಕ ಪ್ರತಿಯೊಬ್ಬ ಮಹಿಳೆಗೂ ಸ್ವತಂತ್ರವೂ, ಜನತಾಂತ್ರಿಕವೂ ಆದ ಪರಿಸರ ಉಳಿಯುವಂತೆ ಮಾಡುವಲ್ಲಿಯೂ ಮಹಿಳಾ ಚಳವಳಿ ಕ್ರಿಯಾಶೀಲವಾಗಬೇಕಾಗಿದೆ; ನಾಗರಿಕ ಹಕ್ಕುಗಳು, ಮಾನವಹಕ್ಕುಗಳು, ಸಮಾನತಾವಾದಿ ಹೋರಾಟದ ಗುಂಪುಗಳಂತೆ, ದಲಿತ, ಗ್ರಾಮೀಣ, ಬುಡಕಟ್ಟು ಜನತೆಯ ಹೋರಾಟಗಳೊಂದಿಗೂ ಮಹಿಳಾ ಚಳವಳಿಯ ಬೇರುಗಳು ವ್ಯಾಪಿಸಬೇಕಾಗಿದೆ. ಜಾತ್ಯತೀತರಾದ ಬುದ್ಧಿ ಜೀವಿಗಳ ಸಾಮಾಜಿಕ ಪಾತ್ರ ಜವಾಬ್ದಾರಿಗಳನ್ನು ಅರಿತು ಮತೀಯವಾದ ಮೂಲಭೂತವಾದಗಳ ವಿರುದ್ಧ ಪ್ರತಿಭಟಿಸ ಬೇಕಾಗಿದೆ, ತೀರಾ ಬಡ ಮಹಿಳೆಯರ ಮುಖ್ಯ ಅವಶ್ಯಕತೆಗಳಾದ ಆರ್ಥಿಕ ನೆರವು, ಆರೋಗ್ಯ ರಕ್ಷಣೆ, ಸಾಕ್ಷರತೆ, ಉದ್ಯೋಗಾವಕಾಶಗಳಂಥ ಸಮಸ್ಯೆಗಳ ತಳಪಾಯದ ಮೇಲೆ ಈ ಚಳವಳಿ ಬೆಳೆಯಬೇಕಾಗಿದೆ.

— ಬಿ.ಎನ್. ಸುಮಿತ್ರಾಬಾಯಿ

# ಮಹಿಳೆಯ ದುಡಿಮೆಗೆ ಬೆಲೆ ಕಟ್ಟಬೇಕು :

## (ವಿಶ್ವಸಂಸ್ಥೆಯ ಪ್ರಗತಿ ಕಾರ್ಯಕ್ರಮ ವರದಿ-1995)

1990 ರಿಂದ ವಿಶ್ವಸಂಸ್ಥೆಯು ಜಗತ್ತಿನಾದ್ಯಂತ ವಿವಿಧ ದೇಶಗಳ ಮಾನವ ಪ್ರಗತಿಯ ವರದಿಯನ್ನು (Human Development Report - HDR) ಪ್ರಕಟಿಸುತ್ತ ಬಂದಿದೆ. ಪ್ರತಿಯೊಂದು ದೇಶದಲ್ಲಿನ ಜನರ ಪ್ರಗತಿಯನ್ನು ಪರಿಶೀಲಿಸುವುದು ಮತ್ತು ಸಾಮಾಜಿಕ ಹಾಗೂ ರಾಜಕೀಯ ಆಯಾಮಗಳ ವಿಶಾಲವಾದ ನೆಲೆಯಿಂದ ದೇಶ ದೇಶಗಳನ್ನು ತುಲನಾತ್ಮಕವಾಗಿ ವಿವೇಚಿಸುವುದು ಈ ವರದಿಯ ಗುರಿ. 1995ರ ಸಾಲಿನಲ್ಲಿ ಈ ವರದಿಯ ಆರ್ಥಿಕ, ಸಾಮಾಜಿಕ ನೆಲೆಗಳಲ್ಲಿ ಸ್ತ್ರೀ - ಪುರುಷರ ನಡುವಿನ ಲಿಂಗ ಅಸಮಾನತೆಯ ಅಂಶಗಳ ಕಡೆಗೆ ವಿಶೇಷವಾಗಿ ಗಮನ ಕೇಂದ್ರೀಕರಿಸಿದೆ.

ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯಕ್ರಮದ ಅಂಗವಾಗಿ (UNDP) ಪ್ರಕಟವಾಗಿರುವ 1995ರ ಸಾಲಿನ ವರದಿಯು ಯು.ಎನ್.ಡಿ.ಪಿಯ ಆಡಳಿತಾಂಗದ ವಿಶೇಷ ಸಲಹೆಗಾರರಾದ, ಪಾಕಿಸ್ತಾನದ ಮಾಜಿ ವಿತ್ತ ಮತ್ತು ಯೋಜನಾ ಮಂತ್ರಿಯಾದ ಮಹಬೂಬ್ ಉಲ್ ಹಕ್ ಅವರ ನಿರ್ದೇಶನದಲ್ಲಿ ರೂಪುಗೊಂಡಿದೆ.

ಜಗತ್ತಿನ ಪ್ರತಿದೇಶದಲ್ಲೂ ಮಹಿಳೆಯರು ಪುರುಷರಿಗಿಂತ ಹೆಚ್ಚು ಗಂಟೆಗಳ ಕಾಲ ದುಡಿಯುತ್ತಾರೆ. ಆದರೆ ಆರ್ಥಿಕ ಪ್ರತಿಫಲದಲ್ಲಿ ಅವರಿಗೆ ದೊರೆಯುವ ಪಾಲು ಪುರುಷರದಕ್ಕಿಂತ ಕಡಿಮೆಯೇ. ರಾಷ್ಟ್ರೀಯ ಅಂಕಿ ಅಂಶಗಳ ಪಟ್ಟಿಗಳಲ್ಲಿ ಮಹಿಳೆಯರ ದುಡಿಮೆಯನ್ನು ಸರಿಯಾಗಿ ಪ್ರತಿ ಬಿಂಬಿಸಿದ್ದೇ ಆದರೆ, ಜಗತ್ತಿನಲ್ಲಿ ದುಡಿದು ಸಂಪಾದಿಸುವವರು ಪುರುಷರು ಎಂಬ ಪುರಾಣವೇ ನುಚ್ಚು ನೂರಾಗುತ್ತದೆ ಎಂದು ಈ ವರದಿಯ ಪ್ರಧಾನ ಸಂಪಾದಕರಾದ ಮಹಬೂಬ್ ಉಲ್ ಹಕ್ ಹೇಳುತ್ತಾರೆ. ವೇತನವುಳ್ಳ ಮತ್ತು ವೇತನರಹಿತ ಕೌಟುಂಬಿಕ ಹಾಗೂ ಸಾಮುದಾಯಿಕ ದುಡಿಮೆಯಲ್ಲಿ ಮಹಿಳೆಯರು, ಪುರುಷರು ತಲಾ ಎಷ್ಟು ಸಮಯವನ್ನು ವ್ಯಯಿಸುತ್ತಾರೆ ಎಂಬ ಬಗೆಗಿನ ಅಧ್ಯಯನವೊಂದು ಜಗತ್ತಿನಾದ್ಯಂತ 31 ದೇಶಗಳ ಸ್ಥಿತಿಯನ್ನು ವಿಶ್ಲೇಷಿಸಿದೆ. ಕೈಗಾರಿಕಾ ದೇಶಗಳು, ಅಭಿವೃದ್ಧಿಶೀಲ ದೇಶಗಳು ಮತ್ತು ಪೂರ್ವ ಯೂರೋಪಿನ ಸಂಕ್ರಮಣ ಸ್ಥಿತಿಯಲ್ಲಿರುವ ಸ್ವತಂತ್ರ ರಾಷ್ಟ್ರಗಳೂ, ಕಾಮನ್‌ವೆಲ್ತ್ ದೇಶಗಳೂ ಈ ಅಧ್ಯಯನದಲ್ಲಿ ಸೇರಿವೆ. ಈ ಅಧ್ಯಯನದ ಫಲವಾದ ಕೆಲವು ತೀರ್ಮಾನಗಳು ಹೀಗಿವೆ :-

1 ಅಭಿವೃದ್ಧಿ ಶೀಲ ಹಾಗೂ ಕೈಗಾರಿಕಾ ಜಗತ್ತುಗಳಲ್ಲಿ ಆದಾಯದ ಸಿಂಹಪಾಲನ್ನು ಪುರುಷರು ತಮ್ಮ ಆರ್ಥಿಕ ಕಾಣಿಕೆಗಳಿಗಾಗಿ ಪಡೆಯುತ್ತಾರೆ. ಆದರೆ ಆದೇ ದೇಶಗಳಲ್ಲಿ ಮಹಿಳೆಯರ ಬಹು ಪಾಲು ಶ್ರಮವು ವೇತನ ರಹಿತವಾಗಿ, ಗುರುತಿಸಲ್ಪಡದೆ, ಅಪಮೌಲ್ಯಕ್ಕೆ ಒಳಗಾಗಿರುತ್ತದೆ.

2 ಪ್ರತಿದೇಶದಲ್ಲೂ ಮಹಿಳೆಯರ ದುಡಿಮೆ ಕಾಲಾವಧಿ ಪುರುಷರದಕ್ಕಿಂತ ಹೆಚ್ಚು. ವೇತನ ಸಹಿತ ಹಾಗೂ ವೇತನ ರಹಿತ ದುಡಿಮೆಯ ಒಟ್ಟು ಹೊರೆಯಲ್ಲಿ ಅಭಿವೃದ್ಧಿಶೀಲ ದೇಶಗಳ ಮಹಿಳೆಯರು ಶೇ 53 ರಷ್ಟು ಹೊರುತ್ತಿದ್ದಾರೆ. ಕೈಗಾರಿಕಾ ರಾಷ್ಟ್ರಗಳಲ್ಲಿ ಅವರ ಹೊರೆ ಶೇ 51 ರಷ್ಟು.

3 ಕೈಗಾರಿಕೀಕೃತ ದೇಶಗಳಲ್ಲಿ ಮಹಿಳೆಯರ ಒಟ್ಟು ದುಡಿಮೆಯಲ್ಲಿ ಸುಮಾರು 2/3 ಭಾಗ ವೇತನವಿಲ್ಲದ ಕಾರ್ಯ ಚಟುವಟಿಕೆಗಳಿಗೂ, 1/3ಭಾಗವು ವೇತನಸಹಿತ ದುಡಿಮೆಗೂ ಬಳಕೆಯಾಗುತ್ತಿದೆ. ಪುರುಷರಿಗೆ ಈ ಪ್ರಮಾಣ ತಿರುವು ಮುರುವಾಗುತ್ತದೆ. ಅಭಿವೃದ್ಧಿ ಶೀಲ ದೇಶಗಳಲ್ಲಿ ಕೂಡ ಮಹಿಳೆಯರ ಒಟ್ಟು ದುಡಿಮೆಯ 2/3 ಭಾಗ ವೇತನ ರಹಿತ ಚಟುವಟಿಕೆಗಳಿಗೇ ವ್ಯಯವಾಗುತ್ತದೆ. ಆದರೆ ಇಲ್ಲಿನ ಪುರುಷರು 1/4 ಕ್ಕಿಂತ ಕಡಿಮೆ ಭಾಗ ವೇತನರಹಿತ ಕ್ರಿಯೆಗಳಿಗಾಗಿ ವ್ಯಯಿಸುತ್ತಾರೆ.

ಬೇರ ಬೇರ ದೇಶಗಳಲ್ಲಿ ಸ್ತ್ರೀ ಪುರುಷರ ದುಡಿಮೆ

ಗಳ ಅವಧಿ ಬೇರೆ ಬೇರೆ ಪ್ರಮಾಣಗಳಲ್ಲಿದೆ. ನಗರ ಮತ್ತು ಗ್ರಾಮ ಪ್ರದೇಶಗಳಲ್ಲಿ ಈ ಅಂತರ ಬೆಚ್ಚು ಬೀಳಿಸುವಷ್ಟು ದೊಡ್ಡದು. ಗ್ರಾಮೀಣ ಪ್ರದೇಶಗಳಲ್ಲಿ ಮಹಿಳೆಯರು ಪುರುಷರಿಗಿಂತ ಸರಾಸರಿ 20% ಹೆಚ್ಚು ಅವಧಿ ದುಡಿಯುತ್ತಾರೆ. ಅವರ ದುಡಿಮೆಯ ದಿನ ಎಂಬುದು ನಗರಗಳಿಗೆ ಹೋಲಿಸಿದರೆ 20% ರಷ್ಟು ಧೀರ್ಘವಾದದ್ದು.

ಕೈಗಾರಿಕಾ ದೇಶಗಳಲ್ಲಿ ಪುರುಷರ ಮತ್ತು ಸ್ತ್ರೀಯರ ದುಡಿಮೆಯ ಅವಧಿ ಅಭಿವೃದ್ಧಿ ಶೀಲ ದೇಶಗಳದ್ದಕ್ಕಿಂತ 20%ರಷ್ಟು ಕಡಿಮೆ. ಇಟಲಿಯ ಮಹಿಳೆಯರು ದಿನದಲ್ಲಿ ಅತಿ ಹೆಚ್ಚು ಗಂಟೆ ದುಡಿಯುತ್ತಾರಾದರೆ ನೆದರ್ ಲ್ಯಾಂಡ್ಸ್‌ನಲ್ಲಿ ಸ್ತ್ರೀ ಪುರುಷರಿಬ್ಬರ ದುಡಿಮೆಯಲ್ಲಿ 8% ರಷ್ಟನ್ನು ಇಟಲಿಯಲ್ಲಿ ಮಹಿಳೆಯರು ನಿರ್ವಸಿದರೆ ಫಿನ್‌ಲ್ಯಾಂಡ್ ಮತ್ತು ಜರ್ಮನಿಯಲ್ಲಿ ಅದು ಶೇ 64ರಷ್ಟು.

ಬಹಳಷ್ಟು ದೇಶಗಳ ಚಾರಿತ್ರಿಕ ಮಾಹಿತಿಗಳನ್ನು ಪರಿಶೀಲಿಸಿರುವ ಈ ಅಧ್ಯಯನವು ಸ್ತ್ರೀ - ಪುರುಷರ ದುಡಿಮೆಯಲ್ಲಿನ ಅಂತರಗಳನ್ನು ಕುಗ್ಗಿಸಿ, ಸಮಾನತೆಯ ಕಡೆಗೆ ಕೊಂಡೊಯ್ಯುವ ದಿಕ್ಕಿನಲ್ಲಿ ಹೆಚ್ಚಿನ ಪ್ರಯತ್ನ ಎಲ್ಲೆಡೆ ಕಂಡುಬರುತ್ತದೆ ಎಂಬುದನ್ನು ಗುರುತಿಸುತ್ತದೆ. ಪೂರ್ವ ಯೂರೋಪಿನ ಸಂಕ್ರಮಣ ಆರ್ಥಿಕ ಸ್ಥಿತಿಯಲ್ಲಿರುವ ದೇಶಗಳು ಮಾತ್ರ ಇಂಥ ಬೆಳವಣಿಗೆಗೆ ಹೊರತಾಗಿವೆ. ಎಂದು ವರದಿ ತಿಳಿಸುತ್ತದೆ.

ಒಂದು ಕುಟುಂಬ ಸಮುದಾಯದ ಪ್ರತಿಯೊಂದು ಕಾರ್ಯ ಚಟುವಟಿಕೆಗೂ ಒಂದು ಬೆಲೆ ಪಟ್ಟಿಯನ್ನು ಜೋಡಿಸಬೇಕು. ಬದುಕಿನ ಬಹು ಅಪರೂಪದ ಸಂಗತಿಗಳಿಗೆ ಹಣದಿಂದ ಬೆಲೆಕಟ್ಟಲು ಸಾಧ್ಯವಿಲ್ಲವಾದರೂ ಕುಟುಂಬ ಮತ್ತು ಸಮುದಾಯದ ಏಳ್ಗೆಗೆ ಮಹಿಳೆಯರ ಕಾಣಿಕೆ ಏನು ಎಂಬುದನ್ನು ಸರಿಯಾಗಿ ಗುರುತಿಸಬೇಕಾದ್ದು ಅವಶ್ಯಕ ಎಂದು ಈ ವರದಿ ಸಾರುತ್ತದೆ. ಆರ್ಥಿಕ ಕಾಣಿಕೆಯಲ್ಲಿ ಮಹಿಳೆಯರ ಪಾಲು ಸ್ಪಷ್ಟವಾಗಿ ದಾಖಲಾದಲ್ಲಿ ಆಸ್ತಿ ಒಡೆತನ, ಬ್ಯಾಂಕ್ ಸಾಲ ಸೌಲಭ್ಯವೇ ಮುಂತಾದ ಬಹು ಮುಖ್ಯ ಆರ್ಥಿಕ ವ್ಯವಹಾರಗಳಲ್ಲಿ ಮಹಿಳೆಯರನ್ನು ನಗಣ್ಯ ವೆಂದು ಭಾವಿಸುವುದನ್ನು ತಪ್ಪಿಸಲು ಸಾಧ್ಯ. ಜಗತ್ತಿನ ಬಡವರಲ್ಲಿ ಶೇಕಡ 70ರಷ್ಟು ಹಾಗೂ ಅನಕ್ಷರಸ್ಥರಲ್ಲಿ ಮೂರನೇ ಎರಡು ಭಾಗ ಮಹಿಳೆಯರು, ಕೆಲವು ದೇಶಗಳನ್ನು ಹೊರತುಪಡಿಸಿದರೆ, ಮಹಿಳೆಯರ ರಾಜಕೀಯಆರ್ಥಿಕ ಸ್ಥಿತಿಯೆನ್ನುವುದು ಪುರುಷರಿಗೆ ಹೋಲಿಸಿದಲ್ಲಿ ಅಸ್ತಿತ್ವವೇ ಇಲ್ಲದಂಥದು. ಯಾವ ಒಂದು ದೇಶದಲ್ಲೂ ಮಹಿಳೆಯರು ಪುರುಷಷ್ಟೇ ಉತ್ತಮ ಸ್ಥಿತಿಯನ್ನು ಪಡೆದಿಲ್ಲ ಎಂಬುದನ್ನು ವಿಶ್ವಸಂಸ್ಥೆಯ ಮಾನವಾಭಿವೃದ್ಧಿ ವರದಿಯ ಸಂಶೋಧನೆಯ ವಾಸ್ತವಾಂಶಗಳ ಆಧಾರದಿಂದ ಸ್ಪಷ್ಟಪಡಿಸಿದೆ.

ಆರ್ಥಿಕ ಮತ್ತು ರಾಜಕೀಯ ವಿಷಯಗಳಲ್ಲಿ ಮಹಿಳೆಯರರಿಗೆ ಅಧಿಕಾರ ದೊರಕಿಸುವ ವಿಷಯ ಒಂದು ದುರಂತ ಕಥೆ. ಬದುಕಿನ ಜೀವಿತದ ಅವಧಿ, ನಿರೀಕ್ಷೆಗಳು, ಶಿಕ್ಷಣ ಮತ್ತು ಕೊಳ್ಳುವ ಮೂಲ ಶಕ್ತಿಗಳ ಆಧಾರದ ಮೇಲೆ ಮಾನವಾಭಿವೃದ್ಧಿಯ ಸೂಚ್ಯಾಂಕ ಪಟ್ಟಿಯನ್ನು ತಯಾರಿಸಿರುವ ವಿಶ್ವಸಂಸ್ಥೆಯು ವಿವಿಧ ದೇಶಗಳ ಸ್ಥಾನ ವೇನೆಂದು ಗುರುತಿಸುತ್ತದೆ. ಆ ಸಂಶೋಧನೆಯಿಂದ ಹೊಮ್ಮುವ ಕೆಲವು ತೀರ್ಮಾನಗಳಿವು :

1 ಒಟ್ಟು ಜಗತ್ತಿನ ಆರ್ಥಿಕ ವ್ಯವಸ್ಥೆಯಲ್ಲಿ 11 ಟ್ರಿಲಿಯನ್ ಡಾಲರಿನಷ್ಟು ಮೊತ್ತಕ್ಕೆ ಯಾವುದೇ ಲೆಕ್ಕ ದೊರೆಯುವುದಿಲ್ಲ. ಅಷ್ಟು ಮೊತ್ತದ ಶ್ರಮ ಮೌಲ್ಯ ರಹಿತವಾಗಿದ್ದು, ಆ ಶ್ರಮ ಮಹಿಳೆಯರದ್ದಾಗಿದೆ.

2 ರಾಜಕೀಯ ಮತ್ತು ಆರ್ಥಿಕ ನಿರ್ಣಯಾಧಿಕಾರದ ಅವಕಾಶಗಳು ಮಹಿಳೆಯರಿಗೆ ಇಲ್ಲವಾಗಿರುವುದು ಜಗತ್ತಿನಾದ್ಯಂತ ಕಂಡು ಬರುವ ಸಮಸ್ಯೆ. ಈ ವಿಷಯದಲ್ಲಿ ಶ್ರೀಮಂತ ದೇಶಗಳೂ ಬಡದೇಶಗಳಂತೆಯೇ ಇವೆ.

3 ಲಿಂಗ ಅಸಮಾನತೆ ನಿವಾರಣೆಯ ವಿಷಯಕ್ಕೂ, ದೇಶಗಳ ಆದಾಯಕ್ಕೂ ಸಂಬಂಧವಿಲ್ಲ ಎನ್ನುವ ಈ ವರದಿ, ಕಡಿಮೆ ಆದಾಯ ವಿರುವ ಎಷ್ಟೋ ದೇಶಗಳಲ್ಲಿ ಸ್ತ್ರೀ - ಪುರುಷರ ನಡುವಿನ ಸಮಾನತೆಯ ವಿಷಯದಲ್ಲಿ ಗಮನಾರ್ಹ ಸಾಧನೆಯಾಗಿರುವುದನ್ನು ಉಲ್ಲೇಖಿಸುತ್ತದೆ. ಸ್ವೀಡನ್, ಫಿನ್‌ಲ್ಯಾಂಡ್, ನಾರ್ವೆ ಮತ್ತು ಡೆನ್ಮಾರ್ಕ್ ಈ ನಾಲ್ಕು ನಾರ್ಡಿಕ್ ದೇಶಗಳು

(8ನೇ ಪುಟಕ್ಕೆ)

# ಲೈಂಗಿಕ ಭಯೋತ್ಪಾದನೆ ನಿಲ್ಲಲಿ

–ಚಂದ್ರ

ಉದ್ಯೋಗಸ್ಥ ಮಹಿಳೆಯರಿಗೆ ದುಡಿವ ಪರಿಸರದಲ್ಲಿ ನೇರವಾಗಿ ಇಲ್ಲ ಸೂಕ್ಷ್ಮವಾಗಿ ಎದುರಾಗುವ ಲೈಂಗಿಕ ಕಿರುಕುಳಗಳು ಬಹಳಷ್ಟು ವರದಿಯಾಗದೆ ಮುಚ್ಚಿಹೋಗುತ್ತವೆ. ದೂರೊಪ್ಪಿಸಿದ ಮಹಿಳೆಯನ್ನೇ ಗುಮಾನಿಯಿಂದ ನೋಡಿ ಗೂಬೆ ಕೂರಿಸುವ ಸಮಾಜದಲ್ಲಿ, ಅಪರಾಧಿ ಗಂಡು ತನ್ನ ಪ್ರಭಾವಳಿಯನ್ನು ಬಳಸಿ ಸಲೀಸಾಗಿ ಪಾರಾಗುವುದಷ್ಟೇ ಅಲ್ಲ, ರಾಜಾರೋಷವಾಗಿ ತನ್ನ ಅಸಭ್ಯ ವರ್ತನೆಯನ್ನು ಮುಂದುವರೆಸುತ್ತಾನೆ. ಆದರೆ ಮಹಿಳಾ ಐ.ಎ.ಎಸ್. ಅಧಿಕಾರಿ ರೂಪನ್ ಬಜಾಜ್, ಮಹಿಳೆಯ ಘನತೆ ಗೌರವಕ್ಕೆ ಧಕ್ಕೆ ಬರುವಂತೆ ವರ್ತಿಸಿದ ಪಂಜಾಬಿನ ಐ.ಪಿ.ಎಸ್. ಅಧಿಕಾರಿ ಕೆ.ಪಿ.ಎಸ್ ಗಿಲ್‌ರನ್ನು ಕೋರ್ಟಿಗೆಳೆದು ಆತನ ತಪ್ಪಿಗೆ ಶಿಕ್ಷೆಯಾಗಬೇಕೆಂದು ಪಣ ತೊಟ್ಟ ಅಪರೂಪದ ದಿಟ್ಟ ಮಹಿಳೆ. ಏಳು ವರ್ಷಗಳ ಹೋರಾಟದ ಕೊನೆಯಲ್ಲಿ ಈಗ ದೊರೆತಿರುವ ಸುಪ್ರೀಮ್ ಕೋರ್ಟಿನ ತೀರ್ಪು ಗೆಲುವಿನ ಸಣ್ಣ ಹಣತೆ ಹಚ್ಚಿದೆ.

ಏಳು ವರ್ಷದ ಹಿಂದೆ, ಡಿ ಜಿ.ಪಿ. ಗಿಲ್ ಅವರ ಬಾಸ್ ಎಸ್.ಎಲ್.ಕಾಪೂರ್ ಅವರು ಏರ್ಪಡಿಸಿದ ಔತಣ ಕೂಟಕ್ಕೆ ರೂಪನ್ ಬಜಾಜ್ ಅವರಿಗೆ ಆಹ್ವಾನವಿತ್ತು. ತಮ್ಮ ಪತಿಯೊಡನೆ ರೂಪನ್ ಪಾರ್ಟಿಗೆ ಆಗಮಿಸಿದ್ದರು. ಅನೇಕ ಅಧಿಕಾರಿಗಳು, ಪತ್ರಿಕೋದ್ಯಮಿಗಳು ಅವರ ಕುಟುಂಬದೊಡನೆ ಬದಿಂದ್ದ ಪಾರ್ಟಿ ಅದು. ಗಂಡಸರೆಲ್ಲ ಒಂದು ಕಡೆ, ಮಹಿಳೆಯರೆಲ್ಲ ಮತ್ತೊಂದು ಕಡೆ ಗುಂಪು ಕಟ್ಟಿದ್ದರು. ಒಂದಷ್ಟು ಪೆಗ್ ಇಳಿಸಿದ್ದ ಗಿಲ್, ಮಹಿಳೆಯರ ಗುಂಪಿನತ್ತ ಆಗಮಿಸಿದರು. ಈತ ಎಂದೂ ಈ ಪಾರ್ಟಿಗಳಿಗೆ ತಮ್ಮ ಪತ್ನಿಯನ್ನು ಕರೆತರುತ್ತಿರಲಿಲ್ಲ. ಬಂದ ಈತ ರೂಪನ್‌ರನ್ನು ತನ್ನ ಪಕ್ಕದಲ್ಲಿದ್ದ ಕುರ್ಚಿಯಲ್ಲಿ ಕೂರಲು ಹೇಳಿದರು. ಕೂರಲು ಹೋದಂತೆ ಆತ ಬಹು ಹತ್ತಿರ ಕುರ್ಚಿ ಎಳೆದುಕೊಂಡಾಗ, ರೂಪನ್ ಅನುಮಾನಿಸಿ ತಟ್ಟನೆದ್ದು ಬೇರೆಡೆ ಬಂದರು. ಆಕೆಯನ್ನು ಹಿಂಬಾಲಿಸಿ ಬಂದ ಗಿಲ್, ಎದುರು ಬಂದು ಆಕೆಯ ಮೊಣಕಾಲು ತಾಕುವಂತೆ ನಿಂತು, 'ಏಳು, ನಾ ಹೇಳ್ತಾ ಇದ್ದೀನಿ ಏಳು, ನನ್ನೊಡನೆ ತಕ್ಷಣ ಬಾ' ಎಂದು ಉದ್ಧಟತನದಿಂದ ಕರೆದಾಗ ರೂಪನ್ ಅವರಿಗೆ ನೆತ್ತಿಗೇರಿದ ಸಿಟ್ಟು, ಜೊತೆಯಲ್ಲೇ ಅಖಂಡ ದಿಗ್ಭ್ರಮೆ, 'ಅಸಭ್ಯವಾಗಿ ವರ್ತಿಸಬೇಡಿ' ಎಂದು ಎಚ್ಚರಿಸಿ ರೂಪನ್ ಕೂತಲ್ಲಿಂದ ಏಳುತ್ತಿದ್ದಂತೆ ಗಿಲ್, ಆಕೆಯ ನಿತಂಬದ ಮೇಲೆ ಎತ್ತಿ ಬಾರಿಸಿದರು. ಅಲ್ಲಿದ್ದ ಆಹ್ವಾನಿತರ ಪತ್ನಿಯರು, ಅತಿಥಿಗಳು, ಅನೇಕ ಪತ್ರಿಕೋದ್ಯಮಿಗಳು ಈ ಘಟನೆಗೆ ಸಾಕ್ಷಿ ಇದ್ದರು.

ರೂಪನ್ ತಟ್ಟನೆ ಗಿಲ್ ಅವರ ವಿರುದ್ಧ ಕ್ರಮ ತೆಗೆದುಕೊಳ್ಳುವಂತೆ ಕೇಳಿಕೊಂಡಳು. ಅದಕ್ಕೆ ಪ್ರತಿಕ್ರಿಯೆ ಇರಲಿಲ್ಲ. ಗಿಲ್ ಅವರದು ಒಂದು ಬಾರಿಯ ಆಕಸ್ಮಿಕ ಅಪರಾಧವಾಗಿರಲಿಲ್ಲ. ಪ್ರತಿ ಬಾರಿ ಕುಡಿದು ಹೆಂಗಸರೊಡನೆ ಅಸಭ್ಯವಾಗಿ ವರ್ತಿಸುವುದು ಆತನ ರೂಢಿಯಾಗಿತ್ತು. ಪ್ರಶ್ನಿಸುವ ಧೈರ್ಯ ಯಾರಿಗಿತ್ತು ? 'ಯಾರೇನು ಮಾಡುತ್ತಾರೆ ?' ಎಂಬ ಆತನ ಭಂಡ ಧೈರ್ಯ ಬಲವಾಗಲು ಕಾರಣ, ಯಾರೂ ಆತನ ಈ ದುರ್ನಡತೆಯ ಬಗ್ಗೆ ಸಾರ್ವಜನಿಕವಾಗಿ ಸೊಲ್ಲೆತ್ತದೆ ಮುಚ್ಚಿಟ್ಟದ್ದು.

ರೂಪನ್, ಗಿಲ್ ಅವರ ವಿರುದ್ಧ ಕೇಸ್ ಫೈಲ್ ಮಾಡಿದರು. ಪಂಜಾಬಿನ 'ಹೀರೊ' ಆಗಿ ಭಯೋತ್ಪಾದಕರನ್ನು ಸದೆಬಡಿವ ಈ 'ಸೂಪರ್ ಕಾಪ್' ಗಿಲ್ ನಡೆಸುವ ಲೈಂಗಿಕ ಭಯೋತ್ಪಾದನೆಯ ಹುಟ್ಟಡಗಿಸಲು ಹೊರಟ ರೂಪನ್ ಅವರ ಹಾದಿ ಸುಗಮವಿರಲಿಲ್ಲ. ಆದರೆ ಆಕೆಯ ಈ ದಿಟ್ಟ ನಿರ್ಧಾರಕ್ಕೆ ಬೆಂಬಲ ಕೊಟ್ಟವರು, ಜೊತೆನಿಂತ ಪತಿ ಬಜಾಜ್ ಮತ್ತು ಬೆನ್ನಿಗೆ ನಿಂತು ಧೈರ್ಯ ತುಂಬಿದ ತಂದೆ ಇಕ್ಬಾಲ್‌ಸಿಂಗ್.

ಸರಕಾರ ರೂಪನ್ ಕೊಟ್ಟ ಪೋಲೀಸು ದೂರನ್ನು ತಳ್ಳಿ ಹಾಕಿ, ಗಿಲ್ ಅವರನ್ನು ಬಚಾವು ಮಾಡಲು ಎಲ್ಲಾ ರೀತಿ ಪ್ರಯತ್ನಿಸಿತು. ತಟ್ಟನೆ ಬಜಾಜ್ ದಂಪತಿಗಳು ಕೋರ್ಟಿಗೆ ಹೋದರು. ಸರಕಾರದ ವಿರೋಧ, ಕೇಸು ತೆಗೆದುಕೊಳ್ಳಲು ಹಿಂತೆಗೆಯುವ ಲಾಯರುಗಳು, ಮಾನಸಿಕ ಚಿತ್ರಹಿಂಸೆ, ಆರ್ಥಿಕ ಮುಗ್ಗಟ್ಟು, ಸಾವಿನ ಬೆದರಿಕೆ

ಎಲ್ಲವನ್ನೂ ಇತ್ತ ರೂಪನ್ ಏಳು ವರ್ಷಗಳು ಎದುರಿಸಿ ನಿಂತರೆ, ಅತ್ತ ಗಿಲ್ ಅವರಿಗೆ 'ಪದ್ಮಶ್ರೀ' ಪುರಸ್ಕಾರ ವಿತ್ತು ಸರಕಾರ ಗೌರವಿಸಿತು. 'ನನ್ನ ಗೌರವವನ್ನು ಕಾಪಾಡಿಕೊಳ್ಳುವ ಹೋರಾಟಕ್ಕಾಗಿ' ಎಂದು ಕಾರಣ ನೀಡಿ ರೂಪನ್ ತಮ್ಮ ಪಿ.ಎಫ್. ಹಣವನ್ನು ಎರಡು ಬಾರಿ ತೆಗೆದುಕೊಂಡಿದ್ದರು. ಇಂದು, ಏಳು ವರ್ಷದ ಅಂಚಿಗೆ ರೂಪನ್ ಗೆಲುವಿನ ಹೊಸಿಲಲ್ಲಿ ನಿಂತಿದ್ದಾರೆ. ಆದರೂ ಪೂರ್ಣ ಜಯದ ಸಂಭ್ರಮವಿಲ್ಲ. ಕೋರ್ಟು ಈ ಕೇಸನ್ನು ಆರು ತಿಂಗಳಲ್ಲಿ ಮುಗಿಸಬೇಕೆಂದು ಆದೇಶ ಕೊಟ್ಟರೂ ಗಿಲ್ ಅವರಿನ್ನೂ ಆರಾಮಾಗಿ ತಮ್ಮ ಕುರ್ಚಿ ಯಲ್ಲಿ ಕುಳಿತಿದ್ದಾರೆ. ಕಾನೂನಿನ ಪ್ರಕಾರ ವಿಚಾರಣೆ ಎದುರಿಸುವ ಯಾರೇ ಐ.ಪಿ.ಎಸ್ ಅಥವಾ ಐ.ಎ.ಎಸ್. ಅಧಿಕಾರಿಯನ್ನು ತಕ್ಷಣ ತಾತ್ಕಾಲಿಕವಾಗಿ ಕೆಲಸದಿಂದ ತೆಗೆದುಹಾಕಬೇಕು. ಆದರೆ ಸರಕಾರ ಗಿಲ್ ಅವರನ್ನಿನ್ನೂ ಹುದ್ದೆಯಿಂದ ಇಳಿಸಿಲ್ಲ.

'ಇದೊಂದು ಕ್ಷುಲ್ಲಕ ಕೇಸ್'' ಎಂದು ತಳ್ಳಿಹಾಕುವ ಎಲ್ಲಾ ಪ್ರಯತ್ನಗಳೂ ನಡೆದು, ಮುಂದುವರೆದಿವೆ. 'ಮೊಟ್ಟ ಮೊದಲಿಗೆ ಇದು ಅಲ್ಪ ವಿಷಯವಲ್ಲ' ಎನ್ನುವ ರೂಪನ್, 'ಅಧಿಕಾರದಲ್ಲಿರುವ ಗಂಡಸೊಬ್ಬನ ಉದ್ಧಟ ತನ ಅಸಭ್ಯತೆಗೆ ಹಾಗೂ ಹೆಣ್ಣಿನ ಘನತೆ ಗೌರವಕ್ಕೆ ಸಂಬಧಿಸಿದ್ದು' ಎಂದು ಹೇಳುತ್ತಾರೆ. 'ರಸ್ತೆಯಲ್ಲಿ ರೋಮಿಯೋಗಳು ಚುಡಾಯಿಸಬಹುದು, ಬಸ್ಸಲ್ಲಿ ಕಾಮಣ್ಣರು ಚಿವುಟಿ ಮರೆಯಾಗಬಹುದು. ಆದರಲ್ಲಿ ಮುಖಮರೆಸಿ ಪರಾರಿಯಾಗುತ್ತಾರೆ. ಅಪ್ಪಟ ಅಪರಿಚಿತ ರೆಂಬ ಮುಸುಕಿನ ಧೈರ್ಯದಲ್ಲಿ ಆ ಕೃತ್ಯಗಳು ನಡೆಯು ತ್ತವೆ. ಇಲ್ಲಿ ಇದು ಬೇರೆಯೇ ಇದೆ. ಕಾನೂನನ್ನು ಕಾಪಾಡಬೇಕಾದವರ ಉಪಸ್ಥಿತಿಯಲ್ಲೇ, ಕೆಲಸದಲ್ಲಿ ಮತ್ತೆ ಭೇಟಿಯಾಗಬೇಕಾದ ಉನ್ನತ ಅಧಿಕಾರಿಯನ್ನೇ 'ಎಷ್ಟಾದರೂ ಹೆಂಗಸು, ಅಪಮಾನವಾದರೂ ದೂರಿಡ ಬಲ್ಲಳೆ' ಎಂಬ ಭಂಡ ವಿಶ್ವಾಸದಲ್ಲಿ ಅಸಭ್ಯವಾಗಿ ವರ್ತಿ ಸುವ ಆತನ ಗರ್ವವನ್ನು, ಕಾನೂನು ಕೊಂಡ ರೀತಿಯ ಅಧಿಕಾರದ ಮದವನ್ನು ನಾ ಪ್ರಶ್ನಿಸುತ್ತೇನೆ' ಎನ್ನು ತ್ತಾರೆ ರೂಪನ್.

ಏಳು ವರ್ಷದ ಒಂದೊಂದು ದಿನದ ಹಣ, ಶ್ರಮ, ನೆಮ್ಮದಿಯನ್ನು ಕಬಳಿಸಿದ ಹೋರಾಟ ಇವರದು. 1969ರಲ್ಲಿ ಐ.ಎ.ಎಸ್.ಗೆ ಸೇರಿಕೊಂಡ ರೂಪನ್, ರಾಜ್ಯದ ಅತ್ಯಂತ ಹಿರಿಯ ಅಧಿಕಾರಿಗಳಲ್ಲಿ ಒಬ್ಬರು, ಹಾಗೂ ಗಿಲ್ ಅವರಿಗಿಂತಲೂ ಉನ್ನತ ಹುದ್ದೆಯಲ್ಲಿದ್ದ ವರು. ಇಂಥವರೊಡನೆಯೇ ಹೀಗೆ ನಡೆಯಬಹುದಾದರೆ ಉಳಿದವರ ಗತಿ ಏನು ಎಂಬ ಪ್ರಾಸ್ನವದ ಅಗಾಧತೆ ಸಾಕು. 'ಹೆಣ್ಣನು ಪೂಜಿಸುತ್ತೇವೆ' ಎಂದು ಹೇಳಿ ಕೊಳ್ಳುವ ಸಮಾಜದ ಟೊಳ್ಳುತನವನ್ನು ಪ್ರದರ್ಶಿಸಲು. ಸಾರ್ವಜನಿಕವಾಗಿ ಕಾಣುವ ಭಯೋತ್ಪಾದನೆಯನ್ನು ಹತ್ತಿಕ್ಕುವಷ್ಟೇ ಮುಖವಾದದ್ದು, ಒಳಗೊಳಗೇ ಹೆಣ್ಣನ್ನು ಕಬಳಿಸುವ ಲೈಂಗಿಕ ಭಯೋತ್ಪಾದನೆಯನ್ನು ಸದೆ ಬಡಿಯುವುದು. ಇದುವರೆಗೆ ಉದ್ಯೋಗದ ಸ್ಥಳದಲ್ಲಿ ಮಹಿಳೆ ಎದುರಿಸುವ ಲೈಂಗಿಕ ಕಿರುಕುಳವನ್ನು ಯಾರೂ ಗಂಭೀರವಾಗಿ ತೆಗೆದುಕೊಂಡಿರಲಿಲ್ಲ. 'ಇದು ನನ್ನ ನೈತಿಕ ಗೆಲುವು' ಎನ್ನುವ ರೂಪನ್ ಅವರ ಈ ಕೇಸಿಗೆ ಏಳು ವರ್ಷದ ನಂತರವಾದರೂ ದೊರೆತ ಸುಪ್ರೀಮ್ ಕೋರ್ಟಿನ ತೀರ್ಪು, ಈ ಹಾದಿಯ ಮೊದಲ ಹೆಜ್ಜೆ ಯಾಗಿದೆ.

---

(6ನೇ ಪುಟದಿಂದ)

ಲಿಂಗ ಸಮಾನತೆಯ ಸೂಚ್ಯಂಕ ಪಟ್ಟಿಯಲ್ಲಿ ಉಚ್ಚ ಸ್ಥಾನದಲ್ಲಿವೆ. ಅವುಗಳಿಗೆ ಹೋಲಿಸಿದಾಗ ಕೆನಾಡ, ನೆದರ್‌ಲ್ಯಾಂಡ್ಸ್ ಮತ್ತು ಸ್ಪೇಯ್ನ್‌ನಂಥ ಸಿರಿವಂತದೇಶ ಗಳೂ ಕೆಳಗೆನಿಲ್ಲುತ್ತವೆ ಎಂಬ ವಾಸ್ತವಾಂಶವನ್ನು ಈ ವರದಿ ತೋರಿಸಿಕೊಡುತ್ತದೆ. ಬಾರ್ಬಡೋಸ್, ಬಹಾ ಮಸ್, ಟ್ರಿನಿಡಾಡ್ ಟೋಬಾಗೋದಂಥ ಕ್ಯಾರಿಬಿಯನ್ ದೇಶಗಳು ಅಭಿವೃದ್ಧಿಶೀಲ ದೇಶಗಳ ಪೈಕಿ ಉಚ್ಚಮಟ್ಟದ ಲಿಂಗಸಮಾನತೆ ಸಾಧಿಸಿರುವ ದೇಶಗಳಾಗಿವೆ ಎಂಬುದನ್ನು ಈ ವರದಿ ತೋರಿಸಿಕೊಡುತ್ತದೆ.

"ಜಾಗತಿಕ ಆದಾಯ/ಉತ್ಪಾದನೆಯಲ್ಲಿ ನೇರ ವಾಗಿ/ಪರೋಕ್ಷವಾಗಿ, ವೈಯಕ್ತಿಕವಾಗಿ ಇಲ್ಲವೆ ಪತಿ ಗಳೊಂದಿಗೆ ಸಹಭಾಗಿಗಳಾಗಿ ಮಹಿಳೆಯರು ಬಹು ದೊಡ್ಡ ಭಾಗವನ್ನು ಉತ್ಪಾದಿಸುತ್ತಿದ್ದರೂ ಅವರನ್ನು ಆರ್ಥಿಕ ಘಟಕಗಳೇ ಅಲ್ಲವೆಂಬಂತೆ ಪರಿಗಣಿಸುವುದು ಅನ್ಯಾಯಕರ'', "ಮಹಿಳೆಯರ ಆರ್ಥಿಕ ಕಾಣಿಕೆಯನ್ನು ಸಮಗ್ರವಾಗಿ ಗುರುತಿಸುವುದರಿಂದ ಪರಂಪರಾಗತವಾಗಿ ಲಿಂಗಾಧರಿತ ಸಂಬಂಧಗಳಿಗೆ ತಪ್ಪು ಆಧಾರಗಳನ್ನು ಒದಗಿಸಿರುವ ಸಾಮಾಜಿಕ - ಆರ್ಥಿಕ ಪ್ರಮೇಯಗಳೇ ಬುಡಮೇಲಾಗಬಲ್ಲುದು'' ಎಂಬುದು ಈ ವಿಶ್ವಸಂಸ್ಥೆಯ ವರದಿಯ ತಾತ್ಪರ್ಯವಾಗಿದೆ.

# 'ಬಂಗಾರದ ಜಿಂಕೆಯ ಹಿಂದೆ'



–ಡಾ. ಸಬೀಹಾ

ಗಂಗಾ ಪಾದೇಕಲ್ ಅವರು ಸಾಹಿತ್ಯ ಕ್ಷೇತ್ರದಲ್ಲಿ ಈಗಾಗಲೇ ತಮ್ಮನ್ನು ಗುರುತಿಸಿಕೊಂಡವರು. ಕಥೆ, ಕಾದಂಬರಿ ಪ್ರಕಾರಗಳಲ್ಲೂ ತೊಡಗಿಸಿಕೊಂಡಿದ್ದರೂ, 'ಗಂಗಾ' ಅವರು ನಮಗೆ ಮುಖ್ಯರಾಗುವುದು ಕತೆಗಾರ್ತಿಯಾಗಿಯೇ.

ಲೇಖಕಿಯರಲ್ಲೂ ಸಾಮಾನ್ಯವಾಗಿ ಎರಡು ಗುಂಪು ಇವೆ. ಜನಪ್ರಿಯ ಬರವಣಿಗೆಯ ಲೇಖಕಿಯರು ಹಾಗೂ ಸ್ತ್ರೀವಾದಿ ಧೋರಣೆಯಿಂದ ಸಮಾಜವನ್ನು ನೋಡಿ, ಸಾಹಿತ್ಯದಲ್ಲೂ ಪ್ರತಿಕ್ರಿಯಿಸುವ ಲೇಖಕಿಯರು. ಗಂಗಾ ಅವರ ಕಾದಂಬರಿಗಳಲ್ಲೂ ಮೊದಲಿನ ಲಕ್ಷಣಗಳು ಅಧಿಕವಾಗಿಯೂ, ಕತೆಗಳಲ್ಲೂ ಎರಡನೆಯ ಲಕ್ಷಣಗಳನ್ನು ದಟ್ಟವಾಗಿಯೂ ಕಾಣಿಸುತ್ತವೆ.

ಪುಸ್ತಕ 'ಬಂಗಾರದ ಜಿಂಕೆಯ ಹಿಂದೆ' ಅವರ ಐದನೆಯ ಕಾದಂಬರಿ. 'ಮೌನ ರಾಗಗಳು' ಎಂಬ ಅವರ ಕಾದಂಬರಿಯಲ್ಲೂ ಸಣ್ಣ ಘಟನೆಯೊಂದನ್ನು ಕಾದಂಬರಿಗೆ ಹಿಗ್ಗಿಸುವ ಪ್ರಯತ್ನ ಮಾಡಲಾಗಿತ್ತು. ರೋಗಿಯೊಬ್ಬನನ್ನು ಬಂಧುಗಳು ಕಾಣುವ ಮತ್ತು ಕಾಣಬೇಕಾದ ರೀತಿಯ ಬಗ್ಗೆ ಹಿತಬೋಧೆ ನೀಡುವುದರತ್ತ ಕಾದಂಬರಿ ಗಮನಹರಿಸಿತ್ತು. 'ಬಂಗಾರದ ಜಿಂಕೆಯ ಹಿಂದೆ' ಕಾದಂಬರಿಯೂ ಇದೇ ಮಾದರಿಗೆ ಸೇರ್ಪಡೆಯಾಗುವ ಕೃತಿ.

ಬಡತನದಲ್ಲಿದ್ದರೂ ತಂಗಿಯರ ವಿವಾಹ, ತಮ್ಮನ ವಿದ್ಯಾಭ್ಯಾಸಕ್ಕಾಗಿ ಜೀವತೇಯುವ ಅಣ್ಣ ಅನಂತಯ್ಯ, ಆತನಿಗೆ ಹೆಗಲೆಣೆಯಾಗಿ ದುಡಿಯುವ ಸಾಧ್ವಿ ಕಾವೇರಮ್ಮ ಒಂದೆಡೆಯಾದರೆ, ಹಾಲಿನಂಥ ಸಂಸಾರವನ್ನು ತನ್ನ ಸ್ವಾರ್ಥಕ್ಕಾಗಿ ಮುರಿಯುವ ಮಹಾಲತಿ ಹಾಗೂ ವಿವೇಚನಾರಹಿತನಾಗಿ ಮಡದಿಯ ಚಾಡಿ ಮಾತನ್ನು ಕೇಳಿ, ಅಣ್ಣ – ಅತ್ತಿಗೆಯರನ್ನು ದೂರಸರಿಸಿ, ಲಂಚದ ವಿಷವೃತ್ತದಲ್ಲಿ ಸಿಲುಕಿಕೊಳ್ಳುವ ರಾಜ ಇವರು ಇನ್ನೊಂದು ತುದಿ, ಹೀಗೆ ನಿಶ್ಚಿತ ಉದ್ದೇಶ, ವ್ಯಕ್ತಿತ್ವಗಳ ಸಿದ್ಧ ಪಾತ್ರಗಳು ಮತ್ತು ನಿರ್ದಿಷ್ಟ ಮುಕ್ತಾಯದತ್ತ ಕಾದಂಬರಿಯ ಚಲನೆ ಇದೆ.

ಬಡತನದ ಜೊತೆಗೆ ಸ್ವಾಭಿಮಾನ, ಆತ್ಮವಿಶ್ವಾಸ, ಬದುಕುವ ಕೆಚ್ಚು ಮುಂತಾದ ಗುಣಗಳನ್ನು, ವಿದ್ಯೆಯ ಜೊತೆಗೆ ಸ್ವಾರ್ಥ, ಲಾಲಸೆ, ಅವಿವೇಕಗಳನ್ನು ಸಮೀಕರಿಸುವ ಮೂಲಕ ಅತಿಭಾವುಕತೆಯನ್ನು ಕಾದಂಬರಿಯಲ್ಲಿ

**'ಬಂಗಾರದ ಜಿಂಕೆಯ ಹಿಂದೆ'**
**–'ಗಂಗಾ' ಪಾದೇಕಲ್**
**ಶೇಷಲತೆ ಪ್ರಕಾಶನ**
**ಬೆಂಗಳೂರು-೫೬೦ ೦೧೦**
**೧೯೯೪**
**ಬೆಲೆ ರೂ.** ೩೬-೦೦

ತರಲಾಗಿದೆ. ಕಾದಂಬರಿಯನ್ನು ಓದಿದ ನಂತರ ಈಗಾಗಲೇ ಓದಿದ ಅನೇಕ ಕೃತಿಗಳ ಸಾಲಿನಲ್ಲಿ ಇದೂ ಸೇರುತ್ತದೆಯೇ ಹೊರತು, ಹೊಸ ಸಂವೇದನೆ ಏನೂ ದೊರೆಯುವುದಿಲ್ಲ.

ಸಂಸ್ಕಾರ ಎನ್ನುವುದು ವಿದ್ಯೆ. ಉದ್ಯೋಗ, ನಾಗರಿಕ ಪರಿಸರಗಳಿಂದ ಬರಲಾರದು, ಅದು ಹುಟ್ಟಿನಿಂದ ವ್ಯಕ್ತಿಯಲ್ಲಿ ಅಂತರ್ಗತವಾಗಿ ಬರುವಂಥದ್ದು ಎಂದು ಹೇಳುವ ಭರದಲ್ಲಿ ಕಾದಂಬರಿ ಆಧುನಿಕತೆಗೆ ಬೆನ್ನು ತಿರುಗಿಸುತ್ತದೆ ಹಳ್ಳಿಯವರಲ್ಲೂ ಹಾಗೂ ಬಡವರಲ್ಲೂ ಮಾತ್ರ ಮಾನವೀಯತೆ ಇರುತ್ತದೆ ಎಂಬುದೂ ಒಂದು ರಮ್ಯ ಧೋರಣೆಯಾಗಿ ಉಳಿದುಬಿಡುತ್ತದೆ.

# ಮಾನವಾಭಿವೃದ್ಧಿಯೇ ಎಲ್ಲ ಆರ್ಥಿಕ ಪ್ರಗತಿಯ ಧ್ಯೇಯವಾಗಬೇಕು

ಮಾನವ ಅಭಿವೃದ್ಧಿಯನ್ನು ಕುರಿತ ವಿಶ್ವಸಂಸ್ಥೆಯ 1995ರ ವರದಿ ಹೇಳುವಂತೆ ಪೂರ್ವ ಏಷ್ಯಾ, ಲ್ಯಾಟಿನ್ ಅಮೆರಿಕಾ ಮತ್ತು ಕ್ಯಾರಿಬಿಯನ್ ದೇಶಗಳು ಮಾನವೀಯ ಅಭಿವೃದ್ಧಿಯಲ್ಲಿ ಅಭಿವೃದ್ಧಿಹೊಂದಿದ ದೇಶಗಳೊಂದಿಗೆ ಸಮನಾಗಿ ನಿಲ್ಲುತ್ತವೆ.

ಒಂದು ಶತಮಾನದ ಹಿಂದೆ ಕೈಗಾರಿಕಾ ರಾಷ್ಟ್ರಗಳಲ್ಲಿ ಆಗಿದ್ದಕ್ಕಿಂತ ಮೂರುಪಟ್ಟು ವೇಗದಲ್ಲಿ ಈ ಅಭಿವೃದ್ಧಿ ಶೀಲ ದೇಶಗಳಲ್ಲಿ ಮಾನವಾಭಿವೃದ್ಧಿ ಸಾಗಿದೆ. ಕೈಗಾರಿಕಾದೇಶದ ಪರ್‌ಕ್ಯಾಪಿಟ ಆದಾಯ ಅಭಿವೃದ್ಧಿ ಶೀಲ ದೇಶದ ಪರ್‌ಕ್ಯಾಪಿಟ ಆದಾಯಕ್ಕಿಂತ 6ಪಟ್ಟು ಹೆಚ್ಚಿನದು. ಆದರೆ ಮಾನವಾಭಿವೃದ್ಧಿಯ ಸರಾಸರಿ ಮೌಲ್ಯ ಅಭಿವೃದ್ಧಿಶೀಲ ದೇಶಕ್ಕಿಂತ ಕೇವಲ 1.6ರಷ್ಟು ಹೆಚ್ಚಿದೆ.

ಈ ಅಂಕಿ ಅಂಶಗಳನ್ನು ಗಮನಿಸಿದಾಗ ದೇಶವೊಂದರ ಆರ್ಥಿಕ ಬೆಳವಣಿಗೆಗೂ ಅದರಲ್ಲಿನ ಮಾನವಾಭಿವೃದ್ಧಿಗೂ ಇರುವ ಸಂಬಂಧವು ಚರ್ಚಾರ್ಹವಾಗುತ್ತದೆ. ವಿಶ್ವ ಸಂಸ್ಥೆಯ ವರದಿ ಹೇಳುತ್ತದೆ.

"ಆರ್ಥಿಕ ಬೆಳವಣಿಗೆಯು ಮಾನವಾಭಿವೃದ್ಧಿಗೆ ಅವಶ್ಯಕದೆಂಬುದು ನಿಜ, ಆದರೆ ಈ ಅಭಿವೃದ್ಧಿಯು ಜನರ ಜೀವಿತಾವಧಿಯದ್ನು ಹೆಚ್ಚಿಸಲು, ಅವರ ಉತ್ಪಾದನಾ ಸಾಮರ್ಥ್ಯವನ್ನು ಬೆಳೆಸಲು, ಅರ್ಥಪೂರ್ಣ ಬದುಕುಗಳತ್ತ ಅವರನ್ನು ನಡೆಸಲು ತನ್ನ ಉದ್ದೇಶವನ್ನು ಹೊಂದಿರಬೇಕು. ಆದರೆ ಇಂಥ ಸರಳವಾದ ಆದರೆ ಪರಿಣಾಮಕಾರಿಯಾದ ಸತ್ಯವನ್ನು ಬಹಳಷ್ಟುಸಲ ಭೌತಿಕ ಹಾಗೂ ಹಣರೂಪದ ಸಂಪತ್ತಿನ ಬೆನ್ನುಹತ್ತಿ ಮರೆಯಲಾಗುತ್ತದೆ. ಜನರನ್ನು ಕೇಂದ್ರವಾಗಿಟ್ಟು ಕೊಳ್ಳದ ಆರ್ಥಿಕ ಪ್ರಗತಿ ಎನ್ನುವುದು ಆತ್ಮವೇ ಇಲ್ಲದ ಅಭಿವೃದ್ಧಿಯೇ ಸರಿ''

---

(ಹಿಂದಿನ ಪುಟದಿಂದ)

ಗಂಗಾ ಅವರ 'ಕತೆ'ಗಳಲ್ಲೂ ಕಾಣಿಸುವ ಪಾತ್ರಗಳಲ್ಲೂ ವೈವಿಧ್ಯವಾಗಲಿ, ಸಹಜತೆಯಾಗಿ ಎಲ್ಲೂ ಕಾಣುವುದಿಲ್ಲ. ಸ್ತ್ರೀಯ ಅಂತರಂಗದ ಹೊಯ್ದಾಟ, ಅವಳ ವ್ಯಕ್ತಿತ್ವ ರೂಪಿಸಿಕೊಳ್ಳುವ ಯತ್ನ, ಬದುಕನ್ನು ತನ್ನ ರೀತಿಯಲ್ಲೂ ಕಂಡುಕೊಳ್ಳುವ ಬಗೆಗಳಲ್ಲೂ ಅವರ ಕತೆಗಳು ಮುಂದಿಡುವ ಸ್ತ್ರೀವಾದಿ ನಿಲುವು ಇಲ್ಲ ಶೂನ್ಯವಾಗಿ, ಸಾಂಪ್ರದಾಯಕ ಸಾಧ್ವಿ – ದುರ್ಗಿ ಪಾತ್ರಗಳೇ ಕಾಣಿಸುವುದು ವಿಪರ್ಯಾಸವಾಗಿದೆ.

ನೀತಿ ಬೋಧೆ ಅಥವಾ ಮನರಂಜನೆ ಇವನ್ನೇ ಕಾದಂಬರಿ ತನ್ನ ಗುರಿಯಾಗಿರಿಸಿಕೊಂಡಾಗ ಸಹಜವಾಗಿಯೇ ಆಗುವ ವಿವರಣಾತ್ಮಕ ಬಂಧದ ದೋಷದಿಂದಲೂ 'ಬಂಗಾರದ ಜಿಂಕೆಯ ಹಿಂದೆ' ಕೃತಿ ಹೊರತಾಗಿಲ್ಲ.' ಇಂಥ ಕೃತಿಗಳಿಗಿಂತ ಭಿನ್ನವಾಗಿ 'ಗಂಗಾ ಪಾದೇಕಲ್' ಅವರು, ಬರೆಯಬಲ್ಲರು ಎಂಬುದಕ್ಕೆ ಅವರ ಅನೇಕ ಕತೆಗಳೇ ಸಾಕ್ಷಿಯಾಗಿವೆ. ಹೀಗಾಗಿ ಅವರ ಮುಂದಿನ ಕಾದಂಬರಿಗಳಲ್ಲೂ ಈ ಬೆಳವಣಿಗೆಯನ್ನು ನಿರೀಕ್ಷಿಸೋಣ.

---

## ಅಭಿನಂದನೆ

ಗಗನ ಸಖಿ ನೀರ್ಜಾ ಭನೋಟ್ 1986ರಲ್ಲಿ ಪಾನ್ ಅಮ್ ವಿಮಾನದಲ್ಲಿ ವಿಮಾನ ಅಪಹರಣಕಾರರೊಡನೆ ಹೋರಾಡುತ್ತಾ ಸತ್ತವಳು. ಆಕೆಯ ಆದೇ ದಿಟ್ಟತನವನ್ನು 'ನೀರ್ಜಾ ಭನೋಟ್ ಪ್ರಶಸ್ತಿ' ಪಡೆದ ಪ್ರತಿ ಮಹಿಳೆಯಲ್ಲೂ ಕಾಣಬಹುದು. ಈ ಬಾರಿಯ ನೀರ್ಜಾ ಭನೋಟ್ ಪ್ರಶಸ್ತಿ ಕೇರಳದ 61 ವರ್ಷದ ರಾಧಾಬಾಯಿ ಪಡೆದುಕೊಂಡಿದ್ದಾರೆ. ಅಧಿಕಾರ ದರ್ಪದ ರಾಜಕಾರಣಿಯೊಬ್ಬನ ಬಡ ಅನಾಥ ಹುಡುಗಿಯ ಮೇಲಿನ ಲೈಂಗಿಕ ಶೋಷಣೆಯ ವಿರುದ್ಧ ಸಮರ ಸಾರಿ, 25 ವರ್ಷಗಳ ಕಾಲ ಹೋರಾಡಿ ಕಡೆಗೂ ಜಯಗಳಿಸಿರುವ ರಾಧಾಬಾಯಿ ಅವರನ್ನು 'ಅಚಲ' ಅಭಿನಂದಿಸುತ್ತದೆ.



# ಪ್ರೀತಿಯ ಅಚಲ

ನನ್ನ ತಮ್ಮ ಏಳೆಂಟು ವರ್ಷಗಳ ಹಿಂದೆ ಹೇಳಿದ ಒಂದು ಅನುಭವ ಪದೇ ಪದೇ ನನ್ನ ನೆನಪಿಗೆ ಬರುತ್ತದೆ. ಆದರೆ ನನಗೆ ಮರೆಯಲು ಸಾಧ್ಯವಾಗುತ್ತಿಲ್ಲ. ಏನು ಅಂಥದಿದೆ ಆದರಲ್ಲಿ ಎನ್ನಿಸುವುದಲ್ಲವೆ ? ಹೇಳುತ್ತೇನೆ. ಆದರಲ್ಲಿ 'ಏನಿದೆ' ಎನ್ನುವುದನ್ನು ನಂತರ ನಾವೆಲ್ಲ ಕೂಡಿ ವಿಶ್ಲೇಷಿಸೋಣ ಆಗದೆ ?

ಈಗ್ಗೆ ಎಂಟು-ಹತ್ತು ವರ್ಷಗಳ ಹಿಂದೆ 'ನಾರ್ವೆ' ದೇಶದ ದಂಪತಿಳಿಬ್ಬರು ನನ್ನ ತಮ್ಮ ಕೆಲಸಮಾಡುವ ಸಂಸ್ಥೆಗೆ (ಭಾರತಕ್ಕೆ) ಬಂದು ಒಂದೆರಡು ತಿಂಗಳು ಇಲ್ಲಿ ವಾಸ್ತವ್ಯಹೂಡಿದ್ದರು. ಸಹಜವಾಗಿ ನನ್ನ ತಮ್ಮನಿಗೂ ಅವರಿಗೂ ಸ್ನೇಹ ಬೆಳೆಯಿತು. ಅವರು ವಾಪಸ್ ಹೋಗುವಾಗ 'ತಮ್ಮ'ನಿಗೆ ತಮ್ಮ ವಿಳಾಸ ಕೊಟ್ಟು ಯಾವಾಗಲಾದರೂ ತಮ್ಮ ದೇಶಕ್ಕೆ ಬರಲು ಆಮಂತ್ರಣ ನೀಡಿ ಹೊರಟರು. ಒಂದೆರಡು ವರ್ಷ ಕಳೆದು ಈ ಎಲ್ಲ ಪ್ರಸಂಗ, ಸ್ನೇಹಗಳು ಮರೆವಿನ ಹಾದಿಹಿಡಿದಿದ್ದಾಗಲೇ ನನ್ನ ತಮ್ಮನಿಗೆ ಅನಿರೀಕ್ಷಿತವಾಗಿ ಯೂರೋಪು ಪ್ರವಾಸ ಒದಗಿಬಂತು. ಅವನು ನಾರ್ವೆ ದಂಪತಿಗಳ ಅಡ್ರೆಸ್ ಹಿಡಿದು ಹೋದದ್ದೂ ಆಯಿತು. ಪ್ರವಾಸದ ದಿನಚರಿ ಅತ್ಯಂತ ಬಿಗುವಾಗಿದ್ದು, ಬಿಡುವುಗಳು ಕಮ್ಮಿ ಇದ್ದಾಗ ಇವನು ನಾರ್ವೆ ದಂಪತಿಗಳಿಗೆ ಪತ್ರಬರೆಯುವ ಫೋನ್ ಮಾಡುವ ಯಾವ ಪ್ರಯತ್ನವನ್ನು ಮಾಡದೆ ತೆಪ್ಪಗಾಗ ಬೇಕಾಯಿತು. ಇನ್ನೇನು ಮರುದಿನವೇ ಸ್ವದೇಶಕ್ಕೆ ವಾಪಸ್ಸಾಗಬೇಕು. ಅಂಥ ಒಂದುದಿನ ನಾಲ್ಕೈದು ಗಂಟೆ ಗಳ ಬಿಡುವು ಸಿಕ್ಕಿಬಿಟ್ಟಿತು. ಮ್ಯಾಪ್ ನೋಡುತ್ತಾನೆ ! ನಾರ್ವೆ ದಂಪತಿಗಳ ಮನೆಗೆ 40 ಕಿಲೋಮೀಟರ್ ದೂರ ದಲ್ಲಿ ತಂಗಿದ್ದಾನೆ !! ತಕ್ಷಣ ಫೋನ್ ತಿರುಗಿಸಿದ್ದಾಯಿತು. ದಂಪತಿಗಳಲ್ಲಿ ಪತಿ ಯಾವುದೋ ಟೂರ್‌ನಲ್ಲಿರುವುದಾಗಿ ತಿಳಿಯಲು. ಆದರೆ ಶ್ರೀಮತಿ ತಾನು ಆಫೀಸಿಗೆ ಕೆಲದಿನ ಗಳ ಮಟ್ಟಿಗೆ ರಜೆ ಹಾಕಿರುವುದರಿಂದ ಮನೆಯಲ್ಲೇ ಇರು ವುದಾಗಿಯೂ 'ತಮ್ಮ'ನನ್ನೂ ಈಕ್ಷಣವೇ ಹೊರಟು ಬರಬೇಕೆಂದೂ ಸಾರಿಗೆ ವ್ಯವಸ್ಥೆ ಸರಿ ಇರದಿದ್ದರೆ ತಾನೇ ಕಾರನ್ನು ತಂದು ತಮ್ಮ ಮನೆಗೆ ಕರೆದೊಯ್ಯುವು ದಾಗಿಯೂ ತುಂಬ ಆದರ ಅಭಿಮಾನಗಳಿಂದ ತಿಳಿಸಿದರು. ತಮ್ಮನಿಗೆ ಸಾರಿಗೆ ವ್ಯವಸ್ಥೆ ಇತ್ತು. ಅವನು ತಡಮಾಡದೆ ತನ್ನ ಕಾರಿನಲ್ಲೇ ನಾರ್ವೆ ದಂಪತಿಗಳ ಮನೆಗೆ ಹೋದ. ಇವನು ಕಟ್ಟಾ ಶಾಖಾಹಾರಿ ಎನ್ನುವುದನ್ನು ಎರಡು ವರ್ಷಗಳ ನಂತರವೂ ನೆನಪಿನಲ್ಲಿಟ್ಟುಕೊಂಡು ಇವನ ಅಭಿರುಚಿಗೆ ತಕ್ಕಂತೆ ಅಡುಗೆ ಮಾಡಿ ಅಭಿಮಾನದಿಂದ ಆಕೆ ಬಡಿಸಿದಳು. ಊಟ ಉಪಾಚಾರವಾದ ಮೇಲೆ ಇನ್ನು ಒಂದೆರಡು ಗಂಟೆ ಸಮಯವಿದ್ದುದರಿಂದ 'ಒಂದಿಷ್ಟು ಶಾಪಿಂಗ್ ಮಾಡಲು ಸಹಾಯಮಾಡಿ' ಎಂದು ವಿನಂತಿಸಿದ. ಆಕೆ ಸಂತೋಷದಿಂದ ಒಪ್ಪಿದರು. "ಸಧ್ಯ ನೀನಿವತ್ತೇ ಬಂದೆ, ನನಗೆ ಬಿಡುವಿದೆ. ನಾಳೆಯಿಂದ ನಾನು ಕೆಲಸಕ್ಕೆ ಹೋಗಬೇಕು. ನನ್ನ ಐದುದಿನ ರಜೆ ನಾಳೆಗೇ ಮುಗಿಯುತ್ತದೆ'' ಎಂದು ಹೇಳಿದ ಆಕೆ ಒಂದೇ ಕ್ಷಣದಲ್ಲಿ ಒಳಹೋಗಿ ಒಂದು ಪೆರಾಂಬಲೇಟರ್‌ನ್ನು ತಳ್ಳಿಕೊಂಡು "ನಡಿ ಶಾಪಿಂಗ್ ಹೋಗೋಣ ನೀನು ನನ್ನ ಮಗನನ್ನೂ ಕರೆದು ಕೊಂಡು ಬಂದರೆ ಸಹಿಸುವಿತಾನೆ'' ಎಂದಾಗ ತಮ್ಮರಾಯ ತಬ್ಬಿಬ್ಬು. "ಮಗನೇ ? ನನಗೆ ತಿಳಿಯಲೇ ಇಲ್ಲವಲ್ಲ'' ಎನ್ನುವ ಉದ್ಗಾರದೊಂದಿಗೆ ಕೆಂಪಗೆ ಗುಂಡು ಗುಂಡಾಗಿದ್ದ ಮಗುವನ್ನು ನೋಡುತ್ತಾ "ಎಷ್ಟು ತಿಂಗಳು ನಿಮ್ಮ ಮಗನಿಗೆ'' ಎಂದ. "ತಿಂಗಳಲ್ಲ'' ಆಕೆ ತಿದ್ದಿದರು. "ಅವನ ವಯಸ್ಸು ನಾಲ್ಕುದಿನಗಳು'' ಎಂದಾಗ ಪ್ರಜ್ಞೆ ತಪ್ಪಿ ಬೀಳುವ ಸರದಿ ತಮ್ಮನದು!

ಬಹಳ ಸಂಪ್ರದಾಯಸ್ಥ ಕುಟುಂಬ ನಮ್ಮದು. ನಮ್ಮಕ್ಕನಿಗೆ ಮತ್ತು ನನಗೆ ಮಕ್ಕಳಾದಾಗ ನಾವು ಹತ್ತು ದಿನ 'ಹೊಲೆಮನೆ ಬಾಣಂತಿ'ಯರಾಗಿ ತಲೆಗೆ ಮಫ್ಲರ್ ಸುತ್ತಿ ಕೊಂಡು ಬೇಸಿಗೆಯಲ್ಲೂ ಬೆಚ್ಚಗೆ ರಗ್ಗುಗಳನ್ನು ಹೊದ್ದು ಕೊಂಡು, ಒಳಗೇ ಕುದಿಯುತ್ತಾ ಬಾತ್‌ರೂಂ ಇತ್ಯಾದಿ ಅವಶ್ಯಕತೆಗಳಿಗೆಲ್ಲಾ ಪರಾವಲಂಬಿಗಳಾಗಿ, ನಂತರವೂ ಎರಡೂವರೆ ತಿಂಗಳು ರೂಮು ಬಿಟ್ಟು ಹೊರಗೇ ಬರದೆ ಬಾಣಂತಿತನ ಮಾಡಿಸಿಕೊಂಡದ್ದು, ತಮ್ಮನ ನೆನಪಿನಲ್ಲಿ ತಕ್ಷಣ ಸುಳಿಯಿತು. ನಾಲ್ಕುದಿನದ ಹಸಿ ಬಾಣಂತಿಗೆ ತೊಂದರೆ ಕೊಟ್ಟು ಅವರಿಂದ ಅಡುಗೆ ಮಾಡಿಸಿಕೊಂಡು ಉಂಡದ್ದು ಆಶ್ಚರ್ಯ ಎನಿಸಿತು. ಈ ಎಲ್ಲ ಭಾವನೆಗಳನ್ನು ಮರೆಮಾಡಲಾಗದೆ ಮನಸ್ಸಿಗೆ

ತೋಚಿದ್ದನ್ನು ಹೇಳಿಯೂಬಿಟ್ಟ. ಅಚ್ಚರಿಯಾಗುವ ಸರದಿ ಆಕೆಯದು. "ನಾನು ತುಂಬ ಆರೋಗ್ಯವಾಗಿದ್ದೇನೆ. ನಾರ್ಮಲ್ ಡೆಲವರಿಯಾದ್ದರಿಂದ ಒಂದುದಿನ ರೆಸ್ಟ್ ಸಾಕು. ಎರಡನೇ ದಿನದಿಂದಲೇ ಗೃಹಕೃತ್ಯಗಳನ್ನು ನಿಭಾಯಿಸುತ್ತಿದ್ದೇನೆ. ಮಗುವಿಗೆ ಬೇರೆ ರೀತಿಯ ವ್ಯವಸ್ಥೆಗಳ ಸಲುವಾಗಿ ನಾಲ್ಕುದಿನ ರಜೆ ಹಾಕಿದೆ. ನಾಳೆಯಿಂದ ಆಫೀಸಿಗೆ ಹೋಗುತ್ತೇನೆ'' ಎಂದಾಗ ತಮ್ಮನ ದೃಷ್ಟಿ ಆಕೆಯಮೇಲೂ ಬಿತ್ತು. ಹೌದು ನಾಲ್ಕುದಿನದ ಮಗು ನಮ್ಮಲ್ಲಿಯ ಎರಡು-ಮೂರು ತಿಂಗಳು ಆರೋಗ್ಯವಂತ ಮಗುವಿನಷ್ಟು ದಪ್ಪಗಿತ್ತು. ಆಕೆಯೂ ಆರೋಗ್ಯ ಕಳೆಯಿಂದ ಲವಲವಿಕೆಯಿಂದ ಇದ್ದರು.

ಈ ಪ್ರಸಂಗ ಅವನು ಹೇಳಿದ ದಿನದಿಂದ ನಾನು ಈ ದಿಕ್ಕಿನಲ್ಲಿ ಅನೇಕಬಾರಿ ಯೋಚಿಸಿದ್ದೇನೆ. ನಮ್ಮಲ್ಲಿಯೂ ಕೂಲಿನಾಲಿ ಮಾಡುವ ಹೆಂಗಸರು ಮಗುವನ್ನು ಹಡೆದ ಕೆಲವೇ ಗಂಟೆಗಳಲ್ಲಿ ಕೆಲಸಕ್ಕೆ ಹಾಜರಾದ ಘಟನೆಗಳನ್ನು ಸಾಕಷ್ಟು ಕೇಳಿದ್ದೇನೆ. ಇದು ಅವರಿಗೆ ಒತ್ತಡದ ಅನಿವಾರ್ಯ. ಆದರೆ ಅವರ ಮತ್ತು ನವಜಾತ ಶಿಶು ಎಷ್ಟು ಆರೋಗ್ಯವಾಗಿರುತ್ತದೆ, ಎನ್ನುವ ಅನುಮಾನವಂತೂ ಇದ್ದೇ ಇದೆ. ಗರ್ಭಿಣಿಯರಾಗಿದ್ದಾಗ ತುಂಬ ಸತ್ವ ಪೂರ್ಣ ಆಹಾರ ಅವರಿಗೆ ಸಿಗುವುದಿಲ್ಲ ಎನ್ನುವುದು ನಮಗೆಲ್ಲರಿಗೂ ತಿಳಿದ ವಿಚಾರವೇ. ಮಗುಹುಟ್ಟಿದ ಮೇಲೂ ತಾಯಿ ಮತ್ತು ಮಗು ಅಶಕ್ತಿಯಿಂದ ಬಳಲುವುದು ರೋಗರುಜಿನಗಳಿಗೆ ಬಲಿಯಾಗುವುದು ಸಾಮಾನ್ಯ. ಇವರನ್ನು ನಾರ್ವೆ ತಾಯಿ ಮಗುವಿಗೆ ಹೋಲಿಸಲಾಗುವುದಿಲ್ಲ.

ಇನ್ನು 'ಉಳ್ಳವರು' ಬಾಣಂತಿತನ ಮಾಡಿಕೊಳ್ಳುವ ಸಂಭ್ರಮ ಎಲ್ಲರಿಗೂ ತಿಳಿದದ್ದೇ. ಕಾಲೇಜಿನ ಉಪನ್ಯಾಸಕಿಯರು ಕುಟುಂಬ ಯೋಜನೆಯನ್ನು ಹೇಗೆ ಬಳಸಿ ಕೊಳ್ಳುತ್ತಾರೆ ನಿನಗೆ ಗೊತ್ತೇನು ? ನವೆಂಬರ್ ಅಥವಾ ಡಿಸೆಂಬರ್‌ನಲ್ಲಿ ಹೆರಿಗೆಯಾಗುವಹಾಗೆ ಪ್ಲಾನ್ ಮಾಡುತ್ತಾರೆ. ಹೆರಿಗೆ ರಜೆಯನ್ನು ಮಾರ್ಚ್ 30ರ ವರೆಗೆ ಪಡೆಯುತ್ತಾರೆ. ಮಾರ್ಚ್ 31 ಕೆಲಸಕ್ಕೆ ಹಾಜರಾದರೆ ಏಪ್ರಿಲ್ 1 ರಿಂದ ಜುಲೈ 1ರ ತನಕ ಮತ್ತೆ ಮೂರು ತಿಂಗಳು ಬೇಸಿಗೆ ರಜೆ ! ಜುಲೈ 1 ರಂದು ಅವರು ಕೆಲಸಕ್ಕೆ ಹಾಜರಾಗುವ ವೇಳೆಗೆ ಮಗುವಿಗೆ 6 ಅಥವಾ 7 ತಿಂಗಳಾಗಿರುತ್ತದೆ. ಹೇಗಿದೆ ಸಂಗೋಪನೆಯ ಯೋಜನೆಗಳು ? ಅನಂತರವೂ ಕೆಲವು ಮಹಾ ತಾಯಂದಿರು ಜುಲೈ 1ರಂದು ಕೆಲಸಕ್ಕೆ ಹಾಜರಾಗಿ ಮತ್ತೆ ಸಿಕ್ ಲೀವ್ ಇತ್ಯಾದಿ ಉಳಿದ ರಜೆಯನ್ನು ವ್ಯವಸ್ಥೆ ಮಾಡಲು ಹೆಣಗಾಡುತ್ತಿರುತ್ತಾರೆ.

ನಿಜ ಮಗುವಿಗೆ ತಾಯಿಯ ಅಗತ್ಯ ತುಂಬ ಇರುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಹಾಲುಣಿಸುವ ತಾಯಂದಿರು ತಾವು ಉದ್ಯೋಗ ಮಾಡುವ ಕಡೆಗಳಲ್ಲೇ ತಮ್ಮ ಮಗುವನ್ನು ತಂದಿಟ್ಟುಕೊಳ್ಳಬಹುದಾಗಿದೆ. ಅವುಗಳನ್ನು ನೋಡಿಕೊಳ್ಳಲು ಬೇಬಿ ಸಿಟ್ಟರ್‌ಗಳು ಪ್ರತ್ಯೇಕ ಸ್ಥಳಾವಕಾಶಗಳು ಇರುತ್ತವೆ. ಮಕ್ಕಳ ಲಾಲನೆ ಪೋಷಣೆ ಇಡೀ ಸಮಾಜದ್ದು, ಸರ್ಕಾರದ್ದು ಎಂದು ಭಾವಿಸಿರುವ ದೇಶಗಳು ಅವು.

ನಮ್ಮಲ್ಲೋ ಸ್ವತಃ ತಂದೆಯಾದವನೇ ಈ ಹೊಣೆಯಿಂದ ಜಾರಿಕೊಂಡು ಬಿಡಬಹುದು. ಮತ್ತು ಸಮಾಜವೂ ಅದನ್ನು ಅತ್ಯಂತ ಸಹಜವೆಂದು ಭಾವಿಸುತ್ತದೆ. ಸಣ್ಣ ಸಣ್ಣ ಕಣ್ಣಿಗೇ ಕಾಣದಂತಹ ಸ್ಕ್ರೂಗಳನ್ನು ಚಿಮುಟದಿಂದ ಹಿಡಿದು ತಿರುಗಿಸಿ ಯಂತ್ರಗಳಿಗೆ ಕಾಂಪೊನೆಂಟುಗಳನ್ನು ಮಾಡುವ ಇಂಜಿನಿಯರ್ ಒಬ್ಬ ತನಗೆ ಸಣ್ಣ ಮಕ್ಕಳನ್ನು 'ಎತ್ತಿಕೊಳ್ಳಲು'ಬರುವುದಿಲ್ಲ ಎಂದು ಒಂದು ವರ್ಷದ ವರೆಗೆ ತನ್ನ ಮಗಳನ್ನೇ ಎತ್ತಿರಲಿಲ್ಲವಂತೆ. ಇದನ್ನು ಆತನ ತಾಯಿಯೇ ಬಹಳ ಹೆಮ್ಮೆಯಿಂದ ನಮ್ಮ ಹತ್ತಿರ ಹೇಳಿಕೊಂಡರು.

ಬಾಣಂತನ ದೀರ್ಘವಾಗಲು ಪರಂಪರಾನುಗತವಾದ ಕಾರಣವೂ ಒಂದಿದೆ. ತಾಯ್ತನದ ಆದ್ದೂರಿತನ ಇಲ್ಲಿಂದಲೇ ಆರಂಭವಾಗುತ್ತದೆ. 'ತಾಯಿ' ಸ್ಥಾನದ ವೈಭವೀಕರಣಕ್ಕೆ ಬಾಣಂತಿತನ ಬುನಾದಿಯಾಗುತ್ತದೆ. ಇಂದು ಈ ಮೌಲ್ಯಗಳನ್ನೆಲ್ಲಾ ಮರು ಪರಿಶೀಲಿಸುವ ಅಗತ್ಯವಿದೆ. ವಿಜ್ಞಾನವನ್ನರಿತ ಮಹಿಳೆಯರು ಬಾಣಂತಿತನವನ್ನು ವೈಜ್ಞಾನಿಕವಾಗಿ ಹ್ರಸ್ವಗೊಳಿಸುವ ಮತ್ತು ಅದನ್ನು ಪ್ರಚಾರ ಮಾಡುವ, ಹಾಗೂ ಎಲ್ಲಕ್ಕಿಂತ ಹೆಚ್ಚಾಗಿ ಆರೋಗ್ಯವಂತ ತಾಯಿ-ಮಗುವಿನ, ಸ್ಥಿತಿ-ಗತಿಗಳನ್ನು ತಿಳಿಸುವ ಕೆಲಸ ಅಗತ್ಯವಾಗಿ ಮಾಡಬೇಕಾಗಿದೆ. ಅಲ್ಲವೇನು?

ಇತಿ ನಿನ್ನ
**ಶತಭಿಷಾ**

# ನಮ್ಮ ಹೆಮ್ಮೆಯ ನಾಡು – ಕರ್ನಾಟಕ

ಎರಡು ಸಾವಿರ ವರ್ಷಗಳ ಭವ್ಯ ಇತಿಹಾಸ, ಪರಂಪರೆಯ ಪುಣ್ಯ ಭೂಮಿ ಕರ್ನಾಟಕ. ಇದು ವಿವಿಧ ಮತ, ಧರ್ಮಗಳ ಸಂಗಮ; ಉದಾತ್ತ ದಾರ್ಶನಿಕರ ಮತ್ತು ಮಹಾನ್ ಸಾಹಿತಿಗಳ ನೆಲೆವೀಡು. ರಾಷ್ಟ್ರದ ಸರ್ವತೋಮುಖ ಪ್ರಗತಿಗೆ ಕರ್ನಾಟಕದ ಕೊಡುಗೆ ಗಣನೀಯ. ರಾಷ್ಟ್ರ ನಿರ್ಮಾಣದ ಮಹಾತ್ಕಾರ್ಯವನ್ನು ಮುಂದುವರಿಸುವುದು ನಮ್ಮೆಲ್ಲರ ಪರಮ ಕರ್ತವ್ಯ.

ದಾರ್ಶನಿಕರು, ಸಮಾಜ ಸುಧಾರಕರು, ಸಾಹಿತಿಗಳು, ವಿಜ್ಞಾನಿಗಳು, ಕರ್ನಾಟಕವನ್ನು ಶ್ರೀಮಂತಗೊಳಿಸಿದ್ದಾರೆ.

''ಮಾನವ ಜಾತಿ ತಾನೊಂದೆ ವಲಂ''

–ಪಂಪ

''ಸರ್ವಜ್ಞನೆಂಬುವನು ಗರ್ವದಿಂದಾದವನೆ ?
ಸರ್ವರೊಳೊಂದೊಂದು ನುಡಿಗಲಿತು
ವಿದ್ಯದ ಪರ್ವತವೆ ಆದ ಸರ್ವಜ್ಞ''.

–ಸರ್ವಜ್ಞ

''ಒಂದೇ ಕರ್ನಾಟಕ ಒಂದೇ
ಇಂದೆ, ಎಂದೆ, ಮುಂದೆ,
ಒಂದೆ ಕರ್ನಾಟಕ ಒಂದೇ''

–ದ.ರಾ. ಬೇಂದ್ರೆ

''ಎಲ್ಲರೂ ದೇಶಾಭಿಮಾನದಿಂದ,
ಸೇವಾ ಪ್ರೇಮದಿಂದ ಕರ್ನಾಟಕ ಸಂಸ್ಕೃತಿ
ಭಾಷೆಗಳ ಸದಭಿಮಾನದಿಂದ ಪ್ರೇರಿತರಾದರೆ
ಅವರು ಹೆಚ್ಚು ಹೆಚ್ಚು ಸುಖಿಗಳಾಗುವರು''

–ಸರ್ ಎಂ. ವಿಶ್ವೇಶ್ವರಯ್ಯ

"ಬರಿಯ ಚದರ ಮೈಲಿಗಳಲ್ತು ಕರ್ನಾಟಕದ
ದೇಶ ವಿಸ್ತೀರ್ಣಂ ನೆನೆ, ನೆನೆ
ಮನೋಮಯದ ಸಂಸ್ಕೃತಿಯ ಕೋಶ
ವಿಸ್ತೀರ್ಣಮಂ ಮರೆಯದಿರು ಚದರ
ಸಂವತ್ಸರದ ಶತಮಾನಗಳ ಕಾಲ
ವಿಸ್ತೀರ್ಣಮಂ ಪ್ರಾಣಮಯ ಭಾವಮಯ
ವಿಸ್ತೀರ್ಣಮಂ ಚಿದಾಕಾಶ ವಿಜ್ಞಾನ
ವಿಸ್ತೀರ್ಣಮಂ''

–ಕುವೆಂಪು

''ಈಸಬೇಕು
ಇದ್ದು ಜೈಸಬೇಕು''.

–ಪುರಂದರದಾಸರು

''ಆತ್ಮ ಯಾವ ಕುಲ ಜೀವ ಯಾವ ಕುಲ
ತತ್ವೇಂದ್ರಿಯಗಳ ಕುಲ ಯಾವುದಯ್ಯ''

–ಕನಕದಾಸರು

''ಕಳಬೇಡ ಕೊಲಬೇಡ ಹುಸಿಯ
ನುಡಿಯಲು ಬೇಡ ಮುನಿಯಬೇಡ
ಅನ್ಯರಿಗೆ ಅಸಹ್ಯಪಡಬೇಡ ತನ್ನ ಬಣ್ಣಿಸ
ಬೇಡ ಇದಿರ ಹಳಿಯಲು ಬೇಡ ಇದೇ
ಅಂತರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ ಸಂಗಮ ದೇವರ–
ನೊಲಿಸುವ ಪರಿ''

–ಬಸವಣ್ಣ

''ನರಕಕ್ಕಿಳ್ಸಿ ನಾಲ್ಗೆ ಸೀಳ್ಸಿ
ಬಾಯೊಲ್ಸಾಕಿದ್ರೂನೆ
ಮೂಗ್ನಲ್ ಕನ್ನಡ ಪದಗಳ್ನಾಡ್ತೀನಿ
ನನ್ ಮನಸ್ನ ನೀ ಕಾಣೆ''

–ಜಿ.ಪಿ. ರಾಜರತ್ನಂ

''ಕರ್ನಾಟಕತ್ವವೆಂದರೆ ಕೇವಲ ದೇಶಾಭಿ–
ಮಾನವಲ್ಲ ಕೇವಲ ಭಾಷಾಭಿಮಾನವಲ್ಲ.
ಇವುಗಳೆಲ್ಲವನ್ನು ಮೀರಿದ ಇವೆಲ್ಲವುಗಳನ್ನು
ಒಳಗೊಂಡು ಪರಿಶುದ್ಧಿ ಭಾವನೆ''

–ಆಲೂರು ವೆಂಕಟರಾಯರು

''ಹಸಿರಾಯಿತು ಕರ್ನಾಟಕ
ಉಸಿರಾಗಲಿ ಕನ್ನಡ''

–ಚನ್ನವೀರ ಕಣವಿ

"ಕರ್ನಾಟಕ ವಾರ್ತೆ"

ಜಯ ಭಾರತ ಜನನಿಯ ತನುಜಾತೆ
ಜಯಹೇ ಕರ್ನಾಟಕ ಮಾತೆ

ಕೃಷ್ಣ, ತುಂಗೆ, ಕಾವೇರಿ ನದಿಗಳ
ಕಲರವದ ಚೆಲುವ ಈ ನಾಡು ಧನ್ಯ.

ಭವ್ಯ ಸಂಸ್ಕೃತಿ, ವಿಶಿಷ್ಟ ಪರಂಪರೆ
ಸುಧೀರ್ಘ ಚರಿತ್ರೆಯ ಕನ್ನಡನಾಡಿನ ಜನರೇ ಧನ್ಯ.

ತಪೋಭೂಮಿ, ಪಾವನ ಭೂಮಿ
ಸುಖಶಾಂತಿ, ಸಹಬಾಳ್ವೆಯ ಜೇನುಗೂಡು,
ಈ ಕರ್ನಾಟಕ ನಿಜಕ್ಕೂ ಧನ್ಯ.

ಬನ್ನಿ....ಸಮೃದ್ಧ, ಸಂಪದ್ಭರಿತ, ಸ್ವಾಭಿಮಾನಿ
ಕರ್ನಾಟಕ ಕಟ್ಟಲು ಒಂದಾಗಿ ದುಡಿಯೋಣ.

ತಮ್ಮೆಲ್ಲರಿಗೂ, ಕನ್ನಡ ರಾಜ್ಯೋತ್ಸವದ ಹಾರ್ದಿಕ
ಶುಭಾಶಯಗಳು

ಕರ್ನಾಟಕ ವಾರ್ತೆ

# ಲಿಂಗಭೇದ ನಿವಾರಣೆಯತ್ತ ಯು.ಎನ್.ಡಿ.ಪಿ. ವರದಿಯ ಸಲಹೆಗಳು

"ಸಮಾನತೆಯ ಹಕ್ಕುಗಳನ್ನು ಎತ್ತಿ ಹಿಡಿಯುವುದು ಎಂದರೆ ಅಧಿಕಾರದಲ್ಲಿರುವವರು ಇಲ್ಲದವರಿಗೆ ತೋರುವ ಔದಾರ್ಯವಲ್ಲ, ಅದು ಪ್ರತಿಯೊಂದು ಸಮಾಜದ ಪ್ರಗತಿಗೆ ಅತ್ಯವಶ್ಯಕವಾದ ಸಂಗತಿಯಾಗಿದೆ'' ಎಂದು ವಿಶ್ವಸಂಸ್ಥೆಯ ಅಭಿವೃದ್ಧಿ ಕಾರ್ಯ ಯೋಜನಾ ವರದಿ ಸಾರುತ್ತದೆ. ಲಿಂಗಬೇಧ ನೀತಿಯ ನಿವಾರಣೆಗೆ ಈ ವರದಿ ಐದು ಅಂಶಗಳ ಕಾರ್ಯ ಯೋಜನೆಯ ಸಲಹೆ ನೀಡಿದೆ :

1 ಮಹಿಳೆಯರ ವಿರುದ್ಧವಾಗಿ ನ್ಯಾಯಾಂಗದಲ್ಲಿರುವ ಪಕ್ಷಪಾತದ ಧೋರಣೆಗಳನ್ನು ಕೊನೆಗೊಳಿಸಿ, ಕಾನೂನಿನ ಸಮಾನತೆಯನ್ನು ಬೆಳೆಸಲು ಅಗತ್ಯ ಚೌಕಟ್ಟನ್ನು ರೂಪಿಸಲು ಒಂದು ನಿರ್ದಿಷ್ಟ ಕಾಲಮಿತಿಯನ್ನು ನಿಗದಿಪಡಿಸಿಕೊಳ್ಳುವುದು ಸರ್ಕಾರಗಳ ಕರ್ತವ್ಯ. ಅದನ್ನು ಸಾಧಿಸಲು ಅಂತರರಾಷ್ಟ್ರೀಯ ಸಮುದಾಯವು ಅನೇಕ ಸಂಘಟನೆಗಳನ್ನು ಚಾಲನೆಗೊಳಿಸಬೇಕಾಗುತ್ತದೆ. ಮಹಿಳೆಯರ ವಿರುದ್ಧವಾದ ಎಲ್ಲ ಬಗೆಯ ತಾರತಮ್ಯ ನೀತಿಗಳನ್ನು ಮೂಲೋತ್ಪಾಟನೆ ಮಾಡಲೆಂದು ಸಂಘಟಿತವಾದ ವಿಶ್ವಸಂಸ್ಥೆಯ ಸಮಾವೇಶವೊಂದು 1979 ರಲ್ಲಿ (CEDAW) ನಿರ್ಣಯವನ್ನು ಸ್ವೀಕರಿಸಿತ್ತು. ಮಹಿಳೆಯರ ಮಾನವ ಹಕ್ಕುಗಳ ಪ್ರತಿಪಾದನೆಯಲ್ಲಿ ಹೊಸದಾರಿಯನ್ನು ತೆರೆವ ಯತ್ನವಾಗಿದ್ದ ಈ ಪಟ್ಟಿಗೆ ವಿಶ್ವಸಂಸ್ಥೆಯ 80 ದೇಶಗಳು ಸಹಿಹಾಕಿದ್ದವು. ಅದನ್ನು ಮೌಲಿಕವೆಂದು ಸ್ವೀಕರಿಸದ ಅಥವಾ ತಮ್ಮ ಭಿನ್ನಾಭಿಪ್ರಾಯ ಕಾಯ್ದುಕೊಂಡ ಅನೇಕ ದೇಶಗಳೂ ಬೇಷರತ್ತಾಗಿ ಈ Convention on the Elimination of All forms of Discrimination Against women ನ ನಿರ್ಣಯವನ್ನು ಅಂಗೀಕರಿಸುವಂತಾಗಬೇಕು.

2 ಅಂತರ ರಾಷ್ಟ್ರೀಯ ಮಟ್ಟದಲ್ಲಿ ಸರ್ಕಾರೇತರ ಸಂಘಟನೆಯೊಂದು ಸ್ಥಾಪಿತವಾಗಬೇಕು 'ವಿಶ್ವ ಮಹಿಳಾ ಕಾವಲು ಸಮಿತಿ (world women's watch) ಎಂಬ ಈ ಸಂಸ್ಥೆಯು ಕಾನೂನಿನ ದೃಷ್ಟಿಯಿಂದ ಪ್ರತಿಯೊಂದು ದೇಶದಲ್ಲಿ ಅಸ್ತಿತ್ವದಲ್ಲಿರುವ ತಾರತಮ್ಯಗಳ ವಾಸ್ತವ ವರದಿಯನ್ನು ತಯಾರಿಸಬೇಕು. ವಿವಿಧ ರಾಷ್ಟ್ರೀಯ ಸರ್ಕಾರಗಳು ಅಂತರ ರಾಷ್ಟ್ರೀಯ ವೇದಿಕೆಗಳು ಲಿಂಗ ಸಮಾನತೆ ಸಾಧಿಸುವ ದಿಕ್ಕಿನಲ್ಲಿ ಇಟ್ಟು ಕೊಂಡಿರುವ ಗುರಿಗಳು, ಸಾಧನೆಗಳನ್ನು ಸಿದ್ಧ ಪಡಿಸುವುದೂ ಈ ಸಂಸ್ಥೆಯ ಒಂದು ಉದ್ದೇಶ.

3 ಮಹಿಳೆಯರ ವಿರುದ್ಧವಾದ ಹಿಂಸೆಯು ಒಂದು ಯುದ್ಧ ಶಸ್ತ್ರವೆಂದೂ, ಒಂದು ಯುದ್ಧಾಪರಾಧವೆಂದೂ ಪರಿಗಣಿತವಾಗಬೇಕು. ಇಂಥ ಅಪರಾಧವನ್ನು ಅಂತರ ರಾಷ್ಟ್ರೀಯ ನ್ಯಾಯಮಂಡಲಿಯೊಂದು ಶಿಕ್ಷಿಸುವುದು ಸಾಧ್ಯವೆಂದು ಘೋಷಿಸಬೇಕು. ಸಾಮೂಹಿಕ ಅತ್ಯಾಚಾರಗಳು ಮತ್ತು ಭಯೋತ್ಪಾದನೆ, ಸಶಸ್ತ್ರಹೋರಾಟಗಳ ನಡುವೆ ಮಹಿಳೆಯರು ಎದುರಿಸುವ ಹಿಂಸಾಚಾರಗಳು ಈ ಅಪರಾಧಪಟ್ಟಿಯಲ್ಲಿ ಪರಿಗಣಿತವಾಗುತ್ತವೆ.

4 ಸಾಮಾಜಿಕ ಹಾಗೂ ಸಾಂಸ್ಕೃತಿಕ ನೀತಿನಿಯಮಾವಳಿಗಳನ್ನು ಮತ್ತೆ ರಚಿಸಲು ಮೂರ್ತ ಕಾರ್ಯಕ್ರಮಗಳನ್ನು ಸರ್ಕಾರಗಳು ಕೈಗೊಳ್ಳಬೇಕು. ಸ್ತ್ರೀ ಪುರುಷರ ನಡುವೆ ಕೌಟುಂಬಿಕ ಜವಾಬ್ದಾರಿಗಳ ಸಮಾನರೀತಿಯ ಹಂಚಿಕೆ ಏರ್ಪಡಬೇಕು.

# ನನ್ನ ಬೀಜಿಂಗ್ ಅನುಭವ

–ಕೆ. ಎಸ್. ವಿಮಲ

ವಿಶ್ವ ಸಂಸ್ಥೆಯ ಆಶ್ರಯದಲ್ಲಿ ಚೈನಾದ ರಾಜಧಾನಿ ಬೀಜಿಂಗ್‌ನಲ್ಲಿ ಆಗಸ್ಟ್ 31, 1995 ರಿಂದ ಸೆಪ್ಟೆಂಬರ್ 8-95ರ ವರೆಗೆ ನಡೆದ 4ನೇ ವಿಶ್ವ ಸಮ್ಮೇಳನ ಒಂದು ವಿಶಿಷ್ಟ ಅನುಭವ ನೀಡಿತು. ಅಖಿಲ ಭಾರತ ಪ್ರಜಾ ಸತ್ತಾತ್ಮಕ ಮಹಿಳಾ ಸಂಘಟನೆಯ ಕಾರ್ಯಕರ್ತೆಯಾಗಿ ಕೆಲಸ ಮಾಡುತ್ತಿರುವ ನನಗೆ ರಾಜ್ಯ, ರಾಷ್ಟ್ರಮಟ್ಟದ ಸಮ್ಮೇಳನಗಳ ಕುರಿತು ಒಂದು ಕಲ್ಪನೆ ಇತ್ತು. ಆದರೆ ಒಂದು ಅಂತರ ರಾಷ್ಟ್ರೀಯ ಮಟ್ಟದ ಸಮ್ಮೇಳನ ಹೊಸ ಅನುಭವ. ಅದರಲ್ಲೂ ಪ್ರಥಮ ಬಾರಿಗೆ ಬೃಹತ್ ಸಮ್ಮೇಳನದಲ್ಲಿ 36000 ಪ್ರತಿನಿಧಿಗಳ ಮಧ್ಯೆಯ ಒಡನಾಟದ ಕಲ್ಪನೆಯೇ ಒಂದು ವಿಚಿತ್ರ ಅನಿಸಿಕೆ ಮೂಡಿಸುತ್ತಿತ್ತು. ಅಲ್ಲಿ ನಡೆಯಬಹುದಾದ ಚರ್ಚೆ, ವಿಚಾರ ವಿನಿಮಯಗಳ ರೀತಿಯ ಬಗ್ಗೆ ಸಂದೇಹವೂ ಇತ್ತು. ನಿಜವಾಗಿಯೂ ಹೇಳಬೇಕೆಂದರೆ ಬೀಜಿಂಗ್ ಪ್ರಯಾಣ, ಸಮ್ಮೇಳನದ ಕಲ್ಪನೆ ಖುಷಿ ನೀಡುತ್ತಿದ್ದರೂ ಮನಸ್ಸಿನ ಮೂಲೆಯಲ್ಲೊಂದು ಧ್ವನಿ "ಸಂತೆಯಲ್ಲೊಂದು ಮೆಂತೆ'' ಯಂತೆ ನೀನೊಬ್ಬಳು ಎಂದು ಹೇಳುತ್ತಿತ್ತು. ಇದಕ್ಕೆ ಪುಷ್ಟಿಕೊಂಡುವಂತೆ ದೆಹಲಿಗೆ ಹೊರಡುವ ದಿನದವರೆಗೂ ಬಾರದ ವಿಶ್ವಸಂಸ್ಥೆಯ ಪ್ರತಿನಿಧಿ ನೊಂದಣಿ ಪತ್ರ, ಬಹಳ ಮುಂಚೆಯೇ ಕೈ ಸೇರಿದ ಬೀಜಿಂಗ್ ಸಂಘಟನಾ ಸಮಿತಿಯವರ ವಸತಿ ವ್ಯವಸ್ಥೆಯ ಧೃಡೀಕರಣ ಪತ್ರ... ಈ ಎಲ್ಲ ಗೊಂದಲಗಳ ನಂತರ ಕೊನೆಗೊಮ್ಮೆ ಥಾಯ್ ವಿಮಾನ ನಮ್ಮನ್ನು ಹೊತ್ತು ಬೀಜಿಂಗ್‌ನತ್ತ ಪ್ರಯಾಣ ಬೆಳೆಸಿದಾಗ ಭಾರತೀಯ ಕಾಲಮಾನದ ಪ್ರಕಾರ 28-8-95ರ ಮಧ್ಯರಾತ್ರಿಯಾಗಿತ್ತು. ದೆಹಲಿಯಿಂದ ಬಾಂಕಾಕ್ – ಬಾಂಕಾಕ್ ನಿಂದ ಬೀಜಿಂಗ್... ತಲುಪಿದಾಗ ಅಲ್ಲಿಯ ಕಾಲಮಾನ ಸಂಜೆಯ 4-00 ಘಂಟೆ. ಹೊಸಭಾಷೆ, ಪರಿಸರ, ಸಂಸ್ಕೃತಿಯ ಪರದೇಶದಲ್ಲಿ ಇಳಿಯುವಾಗ ಸಹಜವಾಗಿಯೇ ಇರುವ ಆತಂಕ, ಉದ್ವೇಗ, ಪರದೇಶೀತನ ನನ್ನನ್ನು ಕಾಡುತ್ತಿತ್ತು, ಆದರೆ ಇಳಿದ ಕ್ಷಣದಿಂದ ನಮಗೆ ಸಿಕ್ಕ ಆದರದ ಸ್ವಾಗತ ಮನಸ್ಸನ್ನು ಹಗುರ ಗೊಳಿಸಿತು.

ಬಾಂಕಾಕ್ ನಿಂದ ಹೊರಟ ನಾವಿದ್ದ TG 914 ಥಾಯ್ ವಿಮಾನದಲ್ಲಿ ಶೇಕಡಾ 90ರಷ್ಟು ಸಮ್ಮೇಳನದ ಪ್ರತಿನಿಧಿಗಳೇ ಇದ್ದರು. 15 ದಿವಸಗಳಿಗೆ ಬೇಕಾದ ವೈಯಕ್ತಿಕ ಸಾಮಗ್ರಿಗಳು, ಸಂಘಟನೆಗಳ ಸಾಹಿತ್ಯ, ಪ್ರಚಾರ ಸಾಮಗ್ರಿಗಳ ದೊಡ್ಡ ಹೊರೆಯೇ ಇತ್ತು, ಕೆಲವೇ ನಿಮಿಷಗಳಲ್ಲಿ ಅಂತರ ರಾಷ್ಟ್ರೀಯ ಪ್ರಯಾಣಿಕರು ಅನುಸರಿಸಬೇಕಾದ ಎಲ್ಲ ನಿಯಮಗಳನ್ನು ಪೂರೈಸಿ ಎಲ್ಲರ ಸಾಮಾನು - ಸರಂಜಾಮುಗಳ ವಿಲೇವಾರಿಯೂ ಆಗಿ ಪ್ರತಿನಿಧಿಗಳಿಗಾಗಿಯೇ ಕಾಯುತ್ತಿದ್ದ ಬಸ್ಸುಗಳಲ್ಲಿ ಎಲ್ಲರನ್ನು ಕೂಡಿಸಿಯಾಗಿತ್ತು. ಚೀನೀಯರ ಕಾರ್ಯವೈಖರಿಯ ಬಗ್ಗೆ ಬೆರಗು ಮೂಡುತ್ತಿರುವಾಗಲೇ ಚಿಟಿಕೆ ಹೊಡೆದಷ್ಟು ಸುಲಭವಾಗಿ ಪ್ರತಿನಿಧಿಗಳ ನೊಂದಣಿ ಮಾಡಿಯಾಗಿತ್ತು. ಅವರಿಗೆ ಕೊಂಡಬೇಕಾದ badge ಗಳನ್ನು ವಿತರಿಸಿಯಾಗಿತ್ತು. Bank of China ದ ಉದ್ಯೋಗಿಗಳು ಅಮೇರಿಕನ್ ಡಾಲರ್‌ಗಳನ್ನು ಚೀನೀ ಯುವಾನ್‌ಗಳಿಗೆ ಪರಿವರ್ತಿಸಿ ಕೊಡುತ್ತಿದ್ದ ವೇಗ ಒಬ್ಬ ಬ್ಯಾಂಕ್ ಉದ್ಯೋಗಿಯಾದ ನನಗೆ ಅಚ್ಚರಿ ಮೂಡಿಸಿತು. ಇಷ್ಟೆಲ್ಲ ಶಿಷ್ಟಾಚಾರಗಳನ್ನು ಮುಗಿಸಿ ರೆಪ್ಪೆ ಬಿಡುವಷ್ಟು ಬೇಗ ನಮ್ಮನ್ನು ನಮಗಾಗಿ ಕಟ್ಟಿದ ನೂರಾರು

> **ಕರ್ನಾಟಕದ ಮಹಿಳಾ ಸಂಘಟನೆಗಳಲ್ಲಿ ತನ್ನ ಸಂಘಟನಾ ಶಕ್ತಿ ಮತ್ತು ಕಾರ್ಯ ಚಟುವಟಿಕೆಗಳ ಮೂಲಕ ಗಮನಾರ್ಹವಾಗಿ ಕ್ರಿಯಾಶೀಲವಾಗಿರುವ ಸಂಘಟನೆ ಜನವಾದಿ ಮಹಿಳಾ ಸಂಘಟನೆ. ಕಳೆದ ಹತ್ತು ವರ್ಷಗಳಿಂದ ಈ ಸಂಘಟನೆಯ ರಾಜ್ಯ ಕಾರ್ಯದರ್ಶಿಯಾಗಿ ಕೆಲಸ ಮಾಡುತ್ತಿರುವ ಶ್ರೀಮತಿ ಕೆ.ಎಸ್. ವಿಮಲ ಇತ್ತೀಚೆಗೆ ಬೀಜಿಂಗ್‌ನಲ್ಲಿ ನಡೆದ ಮಹಿಳಾ ಸಮಾವೇಶದಲ್ಲಿ ತಮ್ಮ ಸಂಘಟನೆಯನ್ನು ಪ್ರತಿನಿಧಿಸಿದ್ದರು. ಅವರ ಅನುಭವದ ಕತೆ ಈ ಲೇಖನದಲ್ಲಿದೆ.**

ಹೊಸ ಫ್ಲಾಟ್‌ಗಳಿಗೆ ನಮ್ಮನ್ನು ರವಾನಿಸಿಯಾಗಿತ್ತು. ಬೀಜಿಂಗ್ ನಗರದಿಂದ 64 ಕಿ.ಮಿ. ಗಳಷ್ಟು ದೂರದಲ್ಲಿರುವ ಹಸಿರು ಸೇಬು ತೋಟದ ಮಧ್ಯೆ, ಇರುವ ಪುಟ್ಟನಗರ "ಹುವಾಯುರೊ''ನಲ್ಲಿ N.G.O. Forum ನಡೆಯುಲಿತ್ತು. ವಸತಿ ಗೃಹಗಳಲ್ಲಿ ಪ್ರತಿನಿಧಿಗಳ ಬೇಕು ಬೇಡಗಳ ಪೂರೈಕೆಗೆ ಕಾದು ನಿಂತ ನಗುಮೊಗದ ಚೀನೀಯುವ ಚೇತನಗಳು ಮನಸ್ಸಿನ ಮೂಲೆಯಲ್ಲಿ ಅಳಿದುಳಿದ ಆತಂಕಗಳನ್ನು ದೂರ ಮಾಡಿದರು. ಸ್ವಯಂ ಸೇವಕರಲ್ಲಿ ಹಲವರು ಉನ್ನತವ್ಯಾಸಂಗ ಮಾಡುತ್ತಿರುವ ವಿದ್ಯಾರ್ಥಿಗಳು, ವಿಶ್ವ ವಿದ್ಯಾನಿಲಯದ ಪ್ರೊಫೆಸರ್‌ಗಳು, ತಮ್ಮ ಉದ್ಯೋಗ, ಪ್ರತಿಷ್ಠೆ, ಅಹಂಕಾರಗಳಾವುದನ್ನೂ ಮೆರೆಸದೇ ಯಂತ್ರಚಾಲಿತ ದೂರಸಂಪರ್ಕ ಸಹಾಯದಿಂದ ಹಿಡಿದು ಪ್ರತಿನಿಧಿಗಳ ವಸತಿಗೃಹದ toilet ಗಳನ್ನು ಸ್ವಚ್ಛಗೊಳಿಸುವವರೆಗೆ ಎಲ್ಲ ಕೆಲಸಗಳನ್ನು ನಗುಮೊಗದಿಂದಲೇ ಮಾಡುತ್ತಿದ್ದರು.

31-08-95 ರಂದು ಬೀಜಿಂಗ್‌ನ "workers stadium'' ನಲ್ಲಿ ನಡೆದ ವರ್ಣರಂಜಿತ ಉದ್ಘಾಟನಾ ಸಮಾರಂಭದೊಂದಿಗೆ NGOFORUM ಪ್ರಾರಂಭವಾಯಿತು.

**–ಅಭಿವ್ಯಕ್ತಿಗೆ - ಅವಕಾಶ**

ಸಾಧ್ಯವಾದ ಮಟ್ಟಿಗೆ ಪ್ರತಿನಿಧಿಗಳ ಆಯ್ಕೆ, ಅಭಿವ್ಯಕ್ತಿಗೆ ಅವಕಾಶವಾಗುವಂತೆ ಹಲವು ವಿಷಯಗಳ ಕುರಿತಂತೆ workshop ಗಳನ್ನು ಯೋಜಿಸಲಾಗಿತ್ತು. ಮೊದಲನೆ ದಿನದಿಂದ ಕೊನೆಯ ದಿನದವರೆಗಿನ ಕಾರ್ಯಕ್ರಮದ ವೇಳಾಪಟ್ಟಿ, ವಿಷಯ ಸೂಚಿಗಳನ್ನೊಳಗೊಂಡಂತೆ ವಿವರಗಳನ್ನು ಪ್ರತಿನಿಧಿಗಳಿಗೆ ಒದಗಿಸಲಾಗಿತ್ತು. ದಿನವೊಂದಕ್ಕೆ 360 ವಿಷಯಗಳ ಕುರಿತಂತೆ ಬೆಳಿಗ್ಗೆ 9-00 ರಿಂದ ಸಂಜೆ 7-00 ರವರೆಗೆ work shop ಗಳು ನಡೆಯುತ್ತಿದ್ದವು. 30 ರಿಂದ 3000ಜನ ಕುಳಿತು ಕೊಳ್ಳಬಹುದಾದ ವಿವಿಧ ಸೈಜುಗಳ terrl ಗಳು, ಕೊಠಡಿಗಳು ಸಜ್ಜಾಗಿದ್ದವು, ಪ್ರತಿ ಟೆಂಟ್ ನಲ್ಲಿಯೂ ಇಂಗ್ಲೀಷ್ ಭಾಷೆ ಬಲ್ಲ ಚೀನೀದುಭಾಷಿಗಳು ಇರುತ್ತಿದ್ದರು. ಹಲವು work shop ಗಳಲ್ಲಿ 5 ಭಾಷೆಗಳಲ್ಲಿ ಏಕ ಕಾಲಕ್ಕೆ ತರ್ಜುಮೆ ಮಾಡುವ ಅತ್ಯಾಧುನಿಕ ವ್ಯವಸ್ಥೆಯೂ ಇತ್ತು. work shop ಪ್ರಾರಂಭವಾದ ಮೊದಲದಿನದ ಚರ್ಚೆ, ಕಲಾಪಗಳ ಕುರಿತು ಕೂಲಂಕುಷವಾಗಿ ಪರಿಶೀಲಿಸಿದಾಗ ಕಂಡು ಬಂದ ಅಂಶ ವಿಶ್ವದ ಹೆಚ್ಚಿನ ರಾಷ್ಟ್ರಗಳಲ್ಲಿ ಬೆಳೆದು ಬರುತ್ತಿರುವ ಜಾಗತೀಕರಣದ ವಿರೋಧಿ ಅಲೆ. ಭಾರತದ ನೆಲದಲ್ಲಿ ನಮ್ಮಂತಹ ಸಂಘಟನೆಗಳು ಕಳೆದ ಎರಡು ವರ್ಷಗಳಿಂದ ಜಾಗತೀಕರಣದ ದುಷ್ಪರಿಣಾಮಗಳ ವಿರುದ್ಧ ನಡೆಸುತ್ತಿರುವ ಹೋರಾಟದ ಸಹಧ್ವನಿಯನ್ನು ನಾನು ಅಲ್ಲಿ ಗುರುತಿಸಿದೆ. ನಮ್ಮ ಹೋರಾಟದಗತಿಯನ್ನು ತೀವ್ರಗೊಳಿಸಲು ಒತ್ತಾಸೆ ನೀಡಿದ ಧ್ವನಿಯಾಗಿತ್ತು ಅದು. 2 ರಿಂದ 3ನೇ ದಿನದ ಹೊತ್ತಿಗೆ ಇಡೀ ಸಮ್ಮೇಳನ ಒಂದು ಸ್ಪಷ್ಟತೆಯನ್ನು ಕಂಡುಕೊಂಡಿತೆನ್ನಬಹುದು. ನಡೆದ 3500 ರಷ್ಟು work shop ಗಳಲ್ಲಿ SAP [Structural Adjusrment Programme] [Globalisation] ಜಾಗತೀಕರಣ, ಹಿಂಸೆ' ಮತಾಂಧತೆ. ಶಿಕ್ಷಣ, Empowerment, ಸಾಕ್ಷರತೆ, Legalrights ಇವೇ ಮುಂತಾದ ವಿಷಯಗಳು, ಪ್ರಾಮುಖ್ಯತೆಯನ್ನು ಪಡೆದವು ಇದರ ಜೊತೆಗೇ ಸಲಿಂಗ ರತಿ [Lesbianism]ಯ ಹಕ್ಕುಗಳಕುರಿತ ಚರ್ಚೆನಡೆಸಿದ work shop ಗಳು ಇದ್ದವು.

**ಹೊಸನೀತಿಗಳಿಗೆ – ಮಹಿಳೆಯರ ಸವಾಲು :**

ಪ್ರತಿದಿನವೂ ವಿಸ್ತಾರವಾದ Global Tent area ದಲ್ಲಿ ಸಾಮ್ರಾಜ್ಯಶಾಹಿ ನೀತಿಯ ವಿರುದ್ಧ, ಜಾಗತೀಕರಣದ ದುಷ್ಪರಿಣಾಮಗಳ ವಿರುದ್ಧ ಪ್ರತಿಭಟನಾ ಮೆರವಣಿಗೆಗಳು ನಡೆಯುತ್ತಿದ್ದವು. GATT, DUNKELL ಪ್ರಸ್ತಾಪಗಳು ಮನುಕುಲದ ಉದ್ಧಾರಕ್ಕೆ ತಾರಕ ಮಂತ್ರಗಳೆಂಬಂತೆ ಅಧಿಕಾರರೂಢ ಪಕ್ಷಗಳು ಹೆಚ್ಚಿನ ದೇಶಗಳಲ್ಲಿ ಪಠಿಸುತ್ತಿವೆ. ಆದರೆ ಈ ತಾರಕ ಮಂತ್ರಗಳ ಮಾರಕ ಗುಣಗಳ ವಿರುದ್ಧ ಸಮ್ಮೇಳನದಲ್ಲಿ ಮಹಿಳೆಯರು ಒಕ್ಕೊರಲಿನ ಪ್ರತಿಭಟನೆ ವ್ಯಕ್ತಪಡಿಸುತ್ತಿದ್ದರು. ಪ್ರತಿದಿನ ಕನಿಷ್ಟ 3 ಪ್ರತಿಭಟನಾ ಪ್ರದರ್ಶನಗಳು ನಡೆಯುತ್ತಿದ್ದು ಪ್ರತಿಭಟನೆಗಳು ಎಷ್ಟು ತೀವ್ರವಾಗಿದ್ದವೆನ್ನುವುದಕ್ಕೆ ಒಂದು ಉತ್ತಮ ಉದಾಹರಣೆ ಕೊಡಬಹುದು. ಅಮೇರಿಕದ ಪ್ರಥಮ ಮಹಿಳೆ ಹಿಲೆರಿ ಕ್ಲಿಂಟನ್‌ರವರು NGO FORUM ಗೆ ಭೇಟಿ ಇತ್ತಿದ್ದರು. ಅವರ ಆಗಮನದ ಕುರಿತು ದೊಡ್ಡ ಪ್ರಚಾರ ಮಾಡಲಾಗಿತ್ತು. ಅಂದು ಸುರಿದ ಮಳೆಯಿಂದಾಗಿ ಬಹಿರಂಗ ಸಭೆಗೆ ಬದಲು ಸಭಾಂಗಣವೊಂದರಲ್ಲಿ ಅವರ

ಸಭೆ ಏರ್ಪಡಿಸಲಾಗಿತ್ತು. ಸಭೆಯಲ್ಲಿ ಅವರು 'ಮಾನವ ಹಕ್ಕುಗಳ ಕುರಿತು ಮಾತನಾಡುವಾಗ ಹೊರಗಡೆ ಸುರಿಯುವ ಮಳೆಯಲ್ಲಿ 6–7 ಸಾವಿರ ಮಹಿಳೆಯರು ಅಮೇರಿಕದ ಸಾಮ್ರಾಜ್ಯಶಾಹಿ ನೀತಿಯ ವಿರುದ್ಧ, ದೊಡ್ಡ ಪ್ರತಿಭಟನಾ ಪ್ರದರ್ಶನ ನಡೆಸುತ್ತಿದ್ದರು. ಪ್ರದರ್ಶನಕಾರರ ಘೋಷಣೆಗಳನ್ನು ಎದುರಿಸಲಾರದೇ ಹಿಲೆರಿಯವರು ಮುಖ ಮರೆಸಿಕೊಂಡು ಜಾಗ ಖಾಲಿ ಮಾಡಬೇಕಾಗಿ ಬಂತು. (ವಿಪರ್ಯಾಸವೆಂದರೆ ಇದು ಎಲ್ಲಿಯೂ ಪತ್ರಿಕೆಗಳಿಗೆ ಸುದ್ದಿ ಎನಿಸದಿರುವುದು.) ಈ ವಿಷಯ ವಿಶ್ವದಾದ್ಯಂತ ಸಾಮ್ರಾಜ್ಯಶಾಹಿಯ ಕುಯುಕ್ತಿಯವಿರುದ್ಧ ಮಹಿಳೆಯರು ಸಮರ ಸಾರಿದ್ದಾರೆಂಬುದು ನಿಚ್ಚಳವಾಗಿ ಕಂಡು ಬಂದ ಅಂಶ.

ಪ್ರತಿಭಟನೆಗಳು ಕೂಡ ಕೇವಲ ಪ್ರದರ್ಶನಗಳು ಮಾತ್ರ ಆಗಿರದೇ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಕೂಡ ವ್ಯಕ್ತವಾಗುತ್ತಿದ್ದವು. ಗ್ಯಾಟ್, ಡಂಕೆಲ್ ಐ.ಎಂ.ಎಫ್ ಷರತ್ತುಗಳ ವಿರುದ್ಧ ಬೀದಿ ನಾಟಕಗಳು ಪ್ರದರ್ಶಿತವಾದರೆ, ಅಪಾಯಕಾರಿ ಕುಟುಂಬ ನಿಯಂತ್ರಣ ಸಾಧನಗಳ ಕುರಿತು ಸುಂದರವಾದ ಹಾಡುಗಳನ್ನು ಕಟ್ಟಿ ಹಾಡುತ್ತಿದ್ದರು. SAP ನ ಪರಿಣಾಮದ ಕುರಿತು ಎಷ್ಟೊಂದು ಗಂಭೀರವಾಗಿ ಚರ್ಚೆಗಳಾಗುತ್ತಿದ್ದವೆಂದರೆ -work shop ನ ವಿಷಯ "ಹಳ್ಳಿಯ ಮಹಿಳೆ'', ಸಾಕ್ಷರತೆ, ಹೊಸ ತಂತ್ರಜ್ಞಾನ ಹೀಗೆ ಯಾವುದರ ಕುರಿತು ಇದ್ದರೂ ಚರ್ಚೆಯ ಕೊನೆ ಮುಟ್ಟುವಾಗ ಇವೆಲ್ಲವುಗಳ ಮೇಲೆ Liberlisation policy ಯ ಪರಿಣಾಮದತ್ತ ತಿರುಗಿರುತ್ತಿತ್ತು, ಜೊತೆಗೆ ಮಹಿಳಾ ಕುಲಕ್ಕೆ ಶಾಪವಾಗಿ ಪರಿಣಮಿಸಿರುವ ವೇಶ್ಯಾವೃತ್ತಿಗೆಳೆಯಲು Liberlisation policy ಎಂತಹ ಅವಕಾಶ ಕಲ್ಪಿಸಿಕೊಟ್ಟಿದೆ, ಎಂಬ ದಾರುಣ ಸತ್ಯ ಬೆಳಕಿಗೆ ಬಂತು.

### "ಶಾಂತಿ" ದೂತರು ಯಾರು ?

ವಿವಿಧ ನೆಲೆಗಳಲ್ಲಿ ನಡೆಯುವ ಹಿಂಸೆಯ ಕುರಿತು ವ್ಯಾಪಕ ಚರ್ಚೆ, ವಿಮರ್ಶೆಗಳು ನಡೆದವು. ಕುಟುಂಬದ ಚೌಕಟ್ಟಿನ ಒಳಗೆ ನಡೆಯುವ ಹಿಂಸೆಯಿಂದ ಮೊದಲಾಗಿ ನಿರಾಶ್ರಿತರ ಮೇಲೆ ನಡೆಯುವ ಹಿಂಸೆಯವರೆಗಿನ ಚರ್ಚೆಗಳು ವಿವಿಧ ಹಂತಗಳಲ್ಲಿ ನಡೆದವು, ಶಾಂತಿ ಮಂತ್ರವನ್ನು ಸಾರ್ವಜನಿಕವಾಗಿ ಪಠಿಸುವುದು. ವಾಸ್ತವದಲ್ಲಿ ಅದಕ್ಕೆ ಪೂರ್ಣವ್ಯತಿರಿಕ್ತವಾದ ನೀತಿಗಳನ್ನು ಜಾರಿಗೆ ತರುವುದರ ವಿರುದ್ಧ ಸ್ಪಷ್ಟ ಧ್ವನಿ ಕೇಳಿಬರುತ್ತಿತ್ತು. ಒಂದು ಪ್ಲೀನರಿಯಲ್ಲಿ ಇಂಗ್ಲೆಂಡ್‌ನ ಪ್ರತಿನಿಧಿ ಹೆಲೆನ್ ಓ ಕೆಲರ್ ಎಂಬ ಮಹಿಳೆ ತಮ್ಮ ಅಭಿಪ್ರಾಯ ವ್ಯಕ್ತಪಡಿಸಿದ್ದು ಮಾರ್ಮಿಕವಾಗಿತ್ತು. NGO ಜಾಗತಿಕರಣದ ಕುರಿತ ಪ್ಲೀನರಿಯಲ್ಲಿ ಸಾಂದರ್ಭಿಕವಾಗಿ ಪ್ರಸ್ತಾಪಿಸುತ್ತ ಸಮ್ಮೇಳನದ ಘೋಷಣೆಗಳಾದ "ಶಾಂತಿ ಅಭಿವೃದ್ಧಿ, ಸಮಾನತೆ''ಯ ಕುರಿತು ವಿಶ್ಲೇಷಿಸುತ್ತ "ನನ್ನ ದೇಶದಲ್ಲಿ ಶಸ್ತ್ರಾಸ್ತ್ರ ತಯಾರಿಕೆ ಅತ್ಯಂತ ದೊಡ್ಡ ಉದ್ಯಮವಾಗಿರುವಾಗ ಶಾಂತಿಯ ಮಾತನಾಡುವುದು ಹಾಸ್ಯಸ್ಪದ ಎಂಬ ಅಭಿಪ್ರಾಯ ವ್ಯಕ್ತಪಡಿಸಿದರು. ಮತ್ತು ಮುಂದುವರೆಯುತ್ತ ಜಾಗತಿಕರಣ ಎಲ್ಲರಿಗೂ ಒಳ್ಳೆಯದನ್ನು ಮಾಡಲು ಖಂಡಿತ ಸಫಲವಾಗದು ಎಂದೂ ತಿಳಿಸಿದರು. ಹಲವು ರೀತಿಯ ದೌರ್ಜನ್ಯಕ್ಕೆ ಒಳಗಾದ ಮಹಿಳೆಯರು ನೇರವಾಗಿ ಬಂದು ಮಾತನಾಡಿದ "ಸಾರ್ವಜನಿಕ ವಿಚಾರಣೆ'' work shop ನಲ್ಲಿ ಯುದ್ಧದ ಪರಿಣಾಮಕ್ಕೆ ಒಳಗಾದ ಮಹಿಳೆಯರು, ರಾಜಕೀಯ ಪ್ರೇರಿತ ಹಿಂಸೆಗೆ ಒಳಗಾದ ಮಹಿಳೆಯರು, ಸರ್ಕಾರಗಳ ಉದ್ದೇಶಿತ ಹಿಂಸೆಗಳ ಕುರಿತು (State Led Violence) ಬಂದು ಮಾತನಾಡುವಾಗ ಕೇಳುವವರ ಕಣ್ಣಾಲಿಗಳು ತುಂಬುತ್ತಿತ್ತು. ಆದರೆ ಮಾತನಾಡಿದ ಮಹಿಳೆಯರಲ್ಲಿ ಹತಾಶ ಭಾವನೆ ಇರಲಿಲ್ಲ. ಬದಲಿಗೆ ನಾವಿದನ್ನು ಮೆಟ್ಟಿ ನಿಲ್ಲುತ್ತೇವೆ ಎಂಬ ಛಲ ಕಾಣುತ್ತಿತ್ತು. ನಿಜವಾದ ಅರ್ಥದಲ್ಲಿ ಹಿಂಸೆ, ದೌರ್ಜನ್ಯಗಳನ್ನು ಮೀರಿದ ಶಾಂತಿ, ಸಮಾನತೆಯನ್ನು ಮಹಿಳೆಯರು ಸ್ಥಾಪಿಸಬಯಸುತ್ತಾರೆ. ಇನ್ನು ವುದಕ್ಕೆ ಸಾಕ್ಷಿ ಎಂಬಂತೆ ಜಪಾನೀ ಮಹಿಳೆಯರು "ಹಿರೋಷಿಮಾ''ದ ಭೀಕರ ನೆನಪಿನ ವಿರುದ್ಧ, ಅಣ್ವಸ್ತ್ರ ತಯಾರಿಕೆಯ ವಿರುದ್ಧ, ಶಾಂತಿ ಸ್ಥಾಪನೆಗಾಗಿ ಸಹಿ ಸಂಗ್ರಹ ಮಾಡುತ್ತಿದ್ದರು. ಸಮ್ಮೇಳನದ ಸಂದರ್ಭದಲ್ಲಿಯೇ ಫ್ರಾನ್ಸ್‌ನಲ್ಲಿ ನಡೆದ ಅಣ್ವಸ್ತ್ರ ಪರೀಕ್ಷೆ (Missile test) ಯ ವಿರುದ್ಧ ನಡೆದ ಪ್ರತಿಭಟನೆ ಕೂಡ ಇನ್ನೊಂದು ಉದಾಹರಣೆ.

### ಮತಾಂಧತೆಯ ದಳ್ಳುರಿಯಲ್ಲಿ ಮಹಿಳೆ :

ಸ್ವಾತಂತ್ರ್ಯ ಪೂರ್ವದಿಂದಲೂ ಭಾರತದಲ್ಲಿ ನಡೆಯುತ್ತಿದ್ದ ಕೋಮುಗಲಭೆಗಳು, ಮತಾಂಧರ ಅತಿರೇಕದ ವರ್ತನೆಗಳ ಬಗ್ಗೆ ಅರಿವಿದ್ದ ನಮಗೆ ಅದರ ಭೀಕ

ರತೆಯು ಕಲ್ಪನೆ ಸ್ಪಷ್ಟವಾಗಿಯೇ ಇದೆ. ಕಳೆದ 3 ವರ್ಷಗಳಿಂದ ಇಡೀ ಭರತ ಖಂಡವನ್ನೇ ನುಂಗಿ ಹಾಕುವ ಮಟ್ಟದಲ್ಲಿ ನಡೆಸುತ್ತಿರುವ ಚಟುವಟಿಕೆಗಳ ಮಧ್ಯೆ ಇದ್ದ ನನಗೆ ಅದರ ಭೀಕರತೆಯ ಮತ್ತೊಂದು ಮುಖದ ನೇರ ಪರಿಚಯ ಇರಾನ್‌ನಲ್ಲಿನ ಮತಾಂಧತೆಯ ವಿರುದ್ಧ ನಡೆದ workshop ಮೂಲಕ ಆಯಿತು. ಮತಾಂಧರ ಕಪಿ ಮುಷ್ಟಿಯಿಂದ ತಪ್ಪಿಸಿಕೊಳ್ಳಲೆಂದೇ ದೇಶಬಿಟ್ಟು ಹೋದ ಮಹಿಳೆಯರು ತಮ್ಮದೇ ನೆಲೆಯಲ್ಲಿ ಅದರ ವಿರುದ್ಧ ಹೋರಾಡುತ್ತಿದ್ದಾರೆ. ಅವರದೇ ಮಾತುಗಳಲ್ಲಿ ಹೇಳುವುದಾದರೆ "ಉನ್ನತ ವೈದ್ಯಕೀಯ ವ್ಯಾಸಂಗ ಮುಗಿಸಿ ಸಮಾಜ ಸೇವೆ ಸಲ್ಲಿಸುತ್ತಿರುವ ವೈದ್ಯೆಯೊಬ್ಬರು ಸಾರ್ವಜನಿಕವಾಗಿ ಬುರ್ಖಾಧರಿಸದೆ ಓಡಾಡಿದಳೆಂಬ ಕಾರಣಕ್ಕೆ ಚಿತ್ರಹಿಂಸೆಗೆ ಗುರಿಯಾಗಿ ಸಾವನ್ನಪ್ಪಿದ ಘಟನೆ; ಕುಟುಂಬದಲ್ಲಿ ನಡೆದ ಹುಟ್ಟು ಹಬ್ಬದ ಸಮಾರಂಭದಲ್ಲಿ ಸಂಬಂಧಿಕರೇ ಆದ ಪುರುಷರೊಡನೆ ಬುರ್ಖಾಧರಿಸದೇ ಮಾತನಾಡಿದರೆಂಬ ಕಾರಣಕ್ಕಾಗಿ ಬಿದ್ದ ಛಡಿ ಏಟು ಇಂದಿಗೂ ಅವರು ಮಾಡಿದ ಅಪರಾಧ ವೇಶ್ಯಾವೃತ್ತಿಗೆ ಸಮಾನವಾದ್ದು ಎಂಬ ತೀರ್ಮಾನದಿಂದ ಅವರು ಇಂದಿಗೂ ಸೆರೆಮನೆಯಲ್ಲಿರುವ ಘಟನೆ. (ಗಮನಿಸ ಬೇಕಾದ ಅಂಶ ಆ ಪುರುಷರನ್ನು ಬಂಧಿಸಿದರಾದರೂ ಒಂದೇ ದಿನದಲ್ಲಿ ಅವರ ಬಿಡುಗಡೆ ಆಗಿದೆ) ಇಂತಹ ಕ್ರಿಯೆಗಳ ವಿರುದ್ಧ ನಡೆಯುತ್ತಿರುವ ಹೋರಾಟಕ್ಕೆ ಸಿಗುವ ಜಯ ಸಮಾನತೆಯತ್ತ ಒಂದು ಹೆಜ್ಜೆ''. ಇದು ಹೋರಾಟ ದತ್ತ ಒಂದು ಸಕಾರಾತ್ಮಕ ಹೆಜ್ಜೆಯಾದರೆ ಇನ್ನೊಂದೆಡೆ ಮರಿಯಮ್, ವರ್ಜಿನ್‌ಮೇರಿಯರು ಮಹಾನ್ ಸ್ತ್ರೀವಾದಿಗಳೆಂದು ವಾದಿಸುವ ಗುಂಪು. ಪ್ರಚಲಿತ ಸ್ತ್ರೀವಿಮೋಚನಾ ಚಳುವಳಿಗಳು ಮೂಲತ ಸ್ತ್ರೀ ವಿರೋಧಿ, ಕುಟುಂಬ ವಿರೋಧಿ, ಪ್ರಕೃತಿಗೆ ವಿರುದ್ಧವಾದ, ಅಸಹಜಗಳು ಎಂದು ಪ್ರತಿಪಾದಿಸುವ work shop ಗಳೂ ನಡೆದವು. ಕ್ರಿಶ್ಚಿಯನ್ ಮತ್ತು ಇಸ್ಲಾಂಧರ್ಮಗಳು ವಿಶ್ವದಲ್ಲೇ ಅತ್ಯಂತ ಸಮಾನತೆಯನ್ನು ಹೊಂದಿದ ಧರ್ಮಗಳೆಂದು ಸಾರುವ ಸಾಹಿತ್ಯಗಳನ್ನು ಹಂಚುತ್ತಿದ್ದರು.

**ಸಂಪ್ರದಾಯದ ಸಂಕೋಲೆಯಲ್ಲಿ ಮಹಿಳೆ :**

ಪ್ರಜಾಸತ್ತಾತ್ಮಕ ನೆಲೆಯಲ್ಲಿ ಸಂಪ್ರದಾಯದ ಸಂಕೋಲೆಯಿಂದ ಹೊರಬರಲು ಮಹಿಳೆ ಶಕ್ತಿಮೀರಿ ಪ್ರಯತ್ನಿಸುತ್ತಿರುವುದು ಮಹಿಳಾ ಚಳುವಳಿಯ ಕೊಡುಗೆ. ಆದರೆ ಇದೇ ಸಂದರ್ಭದಲ್ಲಿ ಕೆಲವು ಅಮಾನವೀಯ ಸಂಪ್ರದಾಯಗಳಿಗೆ ನಿರುಪಾಯಳಾಗಿ ಶರಣಾಗುವಪರಿಸ್ಥಿತಿ ಒಂದು work shop ನಲ್ಲಿ ಕಂಡು ಬಂದ ಅಂಶ. ಆಫ್ರಿಕಾದಲ್ಲಿ ಇರುವ ಒಂದು ಸಂಪ್ರದಾಯ ಹೆಣ್ಣುಮಕ್ಕಳ "ಜನನೇಂದ್ರಿಯ ಚುಚ್ಚುವುದು. (Geneticmutieation), ತುಂಬ ನೋವು ಕೊಡುವ, ಜೀವನವಿಡೀ ತೊಂದರೆ ಅನುಭವಿಸಬೇಕಾದ ಅಮಾನುಷ ಕ್ರಿಯೆ ಇದು. ಆ ಕ್ರಿಯೆ ನಡೆಸುವಾಗ ನೈರ್ಮಲ್ಯದತ್ತ ಗಮನ ಕೊಡದೆ, ತೀರ ಅವೈಜ್ಞಾನಿಕ ವಿಧಾನವನ್ನು ಬಳಸುವ ಈ ಕ್ರಿಯೆ ನಡೆಸುತ್ತಿದ್ದ ದಾದಿಯೊಬ್ಬರು ಆ ಸಂಪ್ರದಾಯದಿಂದ ಹೊರಬರುವಂತೆ ಮಹಿಳೆಯರ ಮನ ಒಲಿಸಲು ಪ್ರಯತ್ನಿಸುತ್ತಿದ್ದಾರೆ. ಅವರು ನಡೆಸಿದ work shop ಒಬ್ಬ ಮಹಿಳೆ ತನ್ನ ಅನುಭವ ಹೇಳುತ್ತಿದ್ದರು. ಆಕೆಗೆ ಅಕಸ್ಮಾತ್ ವಿದೇಶದ ಅವಕಾಶ ದೊರೆತು ಪ್ಲಾಸ್ಟಿಕ್ ಸರ್ಜರಿ ಮಾಡಿಸಿಕೊಂಡು ಸ್ವದೇಶಕ್ಕೆ ಮರಳಿದರೆ, ಅಲ್ಲಿ ಆಕೆಗೆ ಮತ್ತೆ ಒತ್ತಡ ತಂದು ಬಲವಂತವಾಗಿ ಆ ಕ್ರಿಯೆಗೆ ಒಳಪಡಿಸಿದ್ದನ್ನು ಕೇಳಿದಾಗ ಎದೆ ಝಲ್ಲೆನ್ನುವಂತಿತ್ತು. ಅಲ್ಲಿ ಬಂದ ಮಹಿಳೆಯರಾರೂ ಆ ಕ್ರಿಯೆಯನ್ನು ಬೆಂಬಲಿಸುವುದಿಲ್ಲವಾದರೂ ನಿಮ್ಮ ಮಕ್ಕಳಿಗೆ ಏನು ಮಾಡುವಿರಿ ಎಂದರೆ ...ನಮಗೆ ಇಷ್ಟವಿಲ್ಲ ಆದರೆ ಸಂಪ್ರದಾಯ ಬಿಡುವುದು ಹೇಗೆ ಎಂಬ ಅಳಲು ಕೇಳಿ ಬಂತು.

ಈ ಎಲ್ಲ ಶ್ರೀಮಂತ ಅನುಭವಗಳ ಜೊತೆಯೇ ಬೆಳಕಿಗೆ ಬಂದ ಮತ್ತೊಂದು ಅಂಶ – ಸಮಾಜವಾದಿ ರಾಷ್ಟ್ರದಲ್ಲಿ ನಡೆದ ಪ್ರಥಮ ಅಂತರರಾಷ್ಟ್ರೀಯ ಸಮ್ಮೇಳನವನ್ನು ದಾರಿ ತಪ್ಪಿಸಲೆಂದೇ ಕೆಲವು ಪಾಶ್ಚಿಮಾತ್ಯ ಪ್ರತಿನಿಧಿಗಳು, ಮಾಧ್ಯಮಗಳು ಪ್ರಯತ್ನಿಸಿದ್ದು ಚೈನಾ ಮಹಾರೋಡ್ ಯುದ್ಧಕ್ಕೂ ಶಾಂತಿ ಪಟವನ್ನು ಹರಡುತ್ತೇವೆ ಎಂದು ಏಷ್ಯಾ ಫೆಸಿಫಿಕ್ ಪ್ರತಿನಿಧಿಗಳು ಸಾರಿದರೆ, ಇಂಡಿಯಾಡೇ ಎಂದು ಆಚರಿಸಿ ಶಾಂತಿಯಾತ್ರೆಗಳು ನಡೆದರೆ, ಪಾಶ್ಚಿಮಾತ್ಯ ಸೋದರಿಯರು ಅಶಾಂತಿ ಹರಡಲು ಶಕ್ತಿಮೀರಿ ಪ್ರಯತ್ನಿಸುತ್ತಿದ್ದರು. ಪ್ರತಿನಿಧಿಗಳ ಸುರಕ್ಷತೆಗಾಗಿ ಮಾಡಿದ ರಕ್ಷಣಾ ವ್ಯವಸ್ಥೆಯನ್ನು ಬೇಹುಗಾರಿಕೆ ಎಂದು ದೂರಿ 24 ಘಂಟೆಗಳೊಳಗೆ ಅದನ್ನೆಲ್ಲ ಗೆದು ಹಾಕದಿದ್ದರೆ ನೇರ ಕ್ರಿಯೆಗೆ (Direct

action) ಇಳಿಯುತ್ತೇವೆ ಎಂಬ ಎಚ್ಚರಿಕೆಯ ನುಡಿಯನ್ನು ಚೈನಾಸರ್ಕಾರಕ್ಕೆ ಹೇಳುತ್ತಿದ್ದರು. ಇದ್ದುದರಲ್ಲಿಯೇ ಸಮಾಧಾನದ ವಿಷಯವೆಂದರೆ ಅಮೇರಿಕದ ಕೆಲವು ಪ್ರತಿನಿಧಿಗಳೇ ಅವರಿಗೆ ತಕ್ಕ ಉತ್ತರ ನೀಡಿದ್ದು. ಅದೆಂದರೆ "ನಾವಿಲ್ಲ ಬಂದಿರುವುದು ಮಹಿಳೆಯರ ಸಮಸ್ಯೆಗಳನ್ನು ಚರ್ಚಿಸಲೇ ಹೊರತು, ಚೈನಾಸರ್ಕಾರ ಮಾಡಿದ ವ್ಯವಸ್ಥೆಗಳ ಕುರಿತು ಚರ್ಚಿಸಲಿಕ್ಕಲ್ಲ, ಇಡೀ ಸಮ್ಮೇಳನದ ಮಹತ್ವವನ್ನೇ ವಿಷಯಾಂತರ ಮಾಡುವ ಪ್ರಯತ್ನವನ್ನು ನನ್ನ ದೇಶದ ಸೋದರಿಯರು ಬಿಡಬೇಕು.''

ಈ ಎಲ್ಲ ಅನುಭವಗಳೊಡನೆ ತಾಯ್ನಾಡಿಗೆ ಮರಳಿದ ನನಗೆ ಇಲ್ಲಿ ಚಳುವಳಿ ವಿಶ್ವದ ಮಹಿಳೆಯರ ಪ್ರತಿಧ್ವನಿಯಾಗಿ ಬೆಳೆದು ಹೆಮ್ಮರವಾಗಬೇಕೆಂಬ ಬಯಕೆ. ಇಷ್ಟೆಲ್ಲ ಬರೆಯುವುದರ ಜೊತೆಗೆ ನನ್ನ ಪ್ರಯಾಣಕ್ಕೆ ಒತ್ತಾಸೆಯಾಗಿ ನಿಂತು ಧನ ಸಹಾಯವನ್ನು ನೀಡಿದ ಬೆಂಗಳೂರು ನಗರ ಜಿಲ್ಲಾ ಮಹಿಳಾ ಮಂಡಲದ ಅಧ್ಯಕ್ಷರು, ಸದಸ್ಯರುಗಳಿಗೆ ಹೃತ್ಪೂರ್ವಕ ಧನ್ಯವಾದ ಸಲ್ಲಿಸುತ್ತೇನೆ.

## ಬಿಡುಗಡೆ ಪಡೆದ 'ಗೌರವಾನ್ವಿತರು'

1994ರ ನೀರ್ಜಾ ಭನೋಟ್ ಪ್ರಶಸ್ತಿ ಪಡೆದ ಭಾನ್ವರಿ ದೇವಿ ರಾಜಾಸ್ಥಾನದ ಬಡ ಕುಂಬಾರ ಹೆಣ್ಣು. ಬಾಲ್ಯ ವಿವಾಹದ ವಿರುದ್ಧ ಹೋರಾಡಿದ ಈಕೆ ಊರ ಪ್ರತಿಷ್ಠಿತರ ಕೋಪಕ್ಕೆ ಗುರಿಯಾದುದಲ್ಲದೆ, 1992ರಲ್ಲಿ ಐದು ಮಂದಿ ರಾಕ್ಷಸರ ಅತ್ಯಾಚಾರಕ್ಕೆ ಬಲಿಯಾದರು. ತನ್ನ ಮೇಲಿನ ದೌರ್ಜನ್ಯವನ್ನು ಮುಚ್ಚಿಡದೆ, ಅಪರಾಧಿಗಳನ್ನು ಬಯಲಿಗೆಳೆಯುವ ಹೋರಾಟದಲ್ಲಿ ಹಳ್ಳಿಯವರ ಹೀನಾಯಕ್ಕೆ, ಉಚ್ಚಾಟಣೆಗೆ ಗುರಿಯಾದರೂ ಮುಂದುವರೆದ ಈಕೆ, ಇಂದಿಗೂ ಮಹಿಳೆ ಮತ್ತು ಮಕ್ಕಳ ಹಿತಕ್ಕಾಗಿ ದುಡಿಯುತ್ತಿರುವ ಮಹಿಳೆ. ಆದರೆ ಮೂರು ವರ್ಷಗಳ ಹೋರಾಟದಂಚಿಗೂ ಇವರ ಬಳಿ ನ್ಯಾಯ ಸುಳಿದಿಲ್ಲ. ಇದೀಗಷ್ಟೆ ಐದು ಜನ ಅಪಾದಿತರನ್ನೂ ಸಾಕಷ್ಟು ಪುರಾವೆ ಇಲ್ಲವೆಂದು ಹೇಳಿ ಬಿಡುಗಡೆ ಮಾಡಲಾಗಿದೆ. 'ಆಪಾದಿತರು 50 ರಿಂದ 60ರ ನಡುವಿನ ವಯಸ್ಸಿನವರಾಗಿದ್ದು, ಗೌರವಾನ್ವಿತ ಕುಟುಂಬಗಳಿಗೆ ಸೇರಿರುವ ಕಾರಣ ಅವರಿಂದ ಅತ್ಯಾಚಾರ ಸಾಧ್ಯವಿಲ್ಲ' ಎಂದು ಹೇಳಿರುವ ನ್ಯಾಯಾಧೀಶರ ಈ ತೀರ್ಪಿನ ವಿರುದ್ಧ ಹೈ ಕೋರ್ಟಿನಲ್ಲಿ ಭಾನ್ವರಿಯ ಪರವಾಗಿ ಹೋರಾಡುತ್ತಿರುವ ಮಹಿಳಾ ಸಂಸ್ಥೆ ಅಪೀಲು ಮಾಡಿಕೊಳ್ಳಲಿದೆ.

---

*Reg No. MAG (5) PRC. DEGL 036/89-87*
*BOOK-POST Periodicals.*

*To*
Smt./Sri

If undelivered please return to :
**Jagruthi Mahila Adhyayana Kendra**
401, Vijay Tower, 2nd Main, RPC Layout
Vijayanagar, II Stage, Bangalore-40